ವರುಷ—೨ ಕುಸುಮ—೨

# ಇವೆತ್

(ಶೃಂಗಾರರಸ ಪ್ರಧಾನ ಕಾದಂಬರಿ)

ಮೂಲ: ಗಾಯ್. ದ. ಮೋಪಾಸಾ

ಅನುವಾದಕ: ಶ್ರೀ. ಪಿ. ವೆಂಕೋಬಾಚಾರ್ಯ
ಬಿ.ಎ.ಬಿ.ಟಿ.

ಆನಂದ ಗ್ರಂಥ ಮಾಲಾ, ಹುಬ್ಬಳ್ಳಿ.

ಜುಲೈ ೧೯೫೦

ಸಾದಾ ಪ್ರತಿ: ೧-೧೨-೦
ಉತ್ತಮ ,, ೨-೮-೦

**ಸಲಹೆಗಾರರು:**

ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ.
ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ. ಬಿ. ಟಿ.
ಶ್ರೀ. ಆರ್. ವಿ. ಕುಲಕರ್ಣಿ, ಎಂ. ಎ.
ಶ್ರೀ. ದೇಸಾಯಿ ದತ್ತಮೂರ್ತಿ.

**ಸಂಪಾದಕರು:**

ಶ್ರೀ. ಪಿ. ವೆಂಕೋಬಾಚಾರ್ಯ ಬಿ. ಎ. ಬಿ. ಟಿ.

—o—

**ಈ ಮಾಲೆಯಲ್ಲಿ ಮುಂದೆ ಬರಲಿರುವ ಪುಸ್ತಕಗಳು**

—o—

**ಸುವರ್ಣ ದೀಪ** (ಕಾದಂಬರಿ) ಶ್ರೀ. ಅ. ನ. ಕೃಷ್ಣರಾಯರು.
**ಸೈಮನನ ತಂದೆ**(ವಿಶ್ವದ ವಿವಿಧ ಭಾಷೆಗಳ ಕತೆಗಳು)ವಿವಿಧ ಲೇಖಕರು.
**ಪೂರ್ಣಿಮಾ** (ಸಂಸಾರದ ಚಿತ್ರಗಳು—ಪತ್ರರೂಪದಲ್ಲಿ)
ಶ್ರೀ. ಟಿ. ಸಿದ್ಧಪ್ಪನವರು(ನವಯುಗದ ಉಪಸಂಪಾದಕರು)
**ಪೀರೇ ಮತ್ತು ಜೀನ್** (ಮೋಪಾಸಾನ ಕಾದಂಬರಿ)
**ಮೋಪಾಸಾನ ಜೀವನ ಚರಿತ್ರೆ**
**ನೋರ್ ಕೋರ್** (ಮೋಪಾಸಾನ ಕಾದಂಬರಿ)

—o—

ಮುದ್ರಕರು:
**ಎಸ್. ವ್ಹಿ. ಶ್ರೇಷ್ಠಿ**
ರಾಯಲ್ ಪ್ರಿ. ಪ್ರೆಸ್ ಹುಬ್ಬಳ್ಳಿ.

ಪ್ರಕಾಶಕರು:
**ಪಿ.ಪಿ. ಆಚಾರ್ಯ & ಕಂ.**
೩೦೩೦, ಗವಳೀಗಲ್ಲಿ, ಹುಬ್ಬಳ್ಳಿ.

# ಗಾಯ್-ದ-ಮೋಪಾಸಾ

## (ಕಾದಂಬರಿಕಾರ)

ಮೋಪಾಸಾನ ಜೀವನ ಚರಿತ್ರೆಯನ್ನು ದೊಡ್ಡ ಪುಸ್ತಕರೂಪದಲ್ಲಿ ಕೊಡಬೇಕೆಂಬ ನನ್ನ ಬಯಕೆ ಬೇಗ ಕೈಗೂಡುವುದೆಂದು ಭಾವಿಸುತ್ತೇನೆ.

ಜಗತ್ಪ್ರಸಿದ್ಧ ಫ್ರೆಂಚ್ ಕತೆಗಾರನಾದ ಮೋಪಾಸಾ, ಕಾದಂಬರಿ ಪ್ರಪಂಚಕ್ಕೆ ಅಪಾರವಾದ ಸೇವೆ ಸಲ್ಲಿಸಿರುವನು. ಸಾಹಿತ್ಯಾಚಾರ್ಯ ಟಾಲ್ಸ್ಟಾಯಿಯವರು ಇವನ ಎಲ್ಲ ಕೃತಿಗಳನ್ನು ಓದಿ ಇವನು ಕಲೆಯನ್ನರಿತ ಜಾಣನು ಎಂದಿದ್ದಾರೆ. ಇವನಲ್ಲಿ ಪ್ರತಿಭೆ ಇದೆ; ರಚನಾಶಕ್ತಿ ಇದೆ; ಸಾಹಿತ್ಯ ಹಸ್ತೊದಗಿಸಬೇಕೆಂಬ ಹಂಬಲವಿದೆ; ವಿಷಯಗ್ರಹಣ ಚಾತುರ್ಯ ವಿದೆ; ಉತ್ತಮ ಶೈಲಿಯಲ್ಲಿ ಸನ್ನಿವೇಶಗಳನ್ನು ಕಳೆಕಟ್ಟುವಂತೆ ಹೆಣೆದು ವಾಸ್ತವ್ಯದ ಹಿನ್ನೆಲೆಗೆ ಕುಂದು ಬಾರದಂತೆ ಚಿತ್ರಿಸುವ ಪ್ರಾಮಾಣಿಕತನ ಇವನಲ್ಲಿ ಇದೆಯೆಂದು ಅವರು ಹೊಗಳಿದ್ದಾರೆ. ಮೋಪಾಸಾ ಬರೆದ 'ಯೂನೀ ವೀ' (Une Vie, ಹೆಣ್ಣಿನ ಬಾಳು) ಎಂಬ ಕಾದಂಬರಿ ಅಪ್ರತಿಮ ಕೃತಿಯೆಂದು ಸಾರಿರುವರು. ಆದರೆ ಮೋಪಾಸಾನು ಪೀರೇ ಜೀನ್ (Pierre et Jean) ತನ್ನ ಉತ್ತಮ ಕಾದಂಬರಿಯೆಂದು ಹೇಳಿರುವನು. ಇವನ ಸಮಕಾಲೀನನಾದ ಅಮೆರಿಕಾದೇಶದ ವಿಮರ್ಶಕ ಮಿತ್ರನಾದ ಹೆನ್ರೀ ಜೇಮ್ಸನು ಸಹಾ ಈ ಅಭಿಪ್ರಾಯವನ್ನು ಸಮರ್ಥಿಸಿರುವನು. ಈ ವಾದದಲ್ಲಿ ಈಗ ತೊಗುವುದಕ್ಕಿಂತ ಈ ಕಾದಂಬರಿಗಳು ಕನ್ನಡ ಜನತೆಯ ಮುಂದೆ ಬಂದಾಗ ಕನ್ನಡಿಗರೇ ನಿರ್ಧರಿಸಲೆಂದು ಸುಮ್ಮನಿರುವದು ಒಳಿತೆನಿಸುತ್ತದೆ. ನನ್ನ ಪ್ರೀತಿಯ ಪುರುಷ (Bel Ami) ಪ್ರೇಮ ಪ್ರವಾಹ (Mount Oriol) ಘೋರ ಸಾವು (Forte Comme La Morte) ನಮ್ಮ ಹೃದಯಗಳು (Notre Coeur) ಎಂಬ ಇವನ ಕಾದಂಬರಿಗಳು ಪ್ರಕಟವಾಗಿವೆ. ಇವಲ್ಲದೆ ಇನ್ನೂ ನಾಲ್ಕಾರು ಕಾದಂಬರಿಗಳ ರೂಪರೇಷೆ ಅವನಲ್ಲಿ ಸಿದ್ಧವಿದ್ದು, ಅವುಗಳನ್ನು ಪೂರ್ತಿ ಮಾಡುವ ಮುನ್ನ ತನ್ನ ೪೨ನೆಯ (೧೮೯೩) ವಯಸ್ಸಿನಲ್ಲಿಯೇ ಆತನು ಸಾವನ್ನಪ್ಪಿದುದು ವಿಶ್ವದ ಕಾದಂಬರಿ ಸಾಹಿತ್ಯಕ್ಕೆ ತುಂಬಲಾರದ ಕೊರತೆಯಾಗಿದೆ.

ಸಾಹಿತ್ಯದಲ್ಲಿ ವಾಸ್ತವಿಕತೆಯನ್ನು ಪೂರ್ಣವಾಗಿ ಕಾದುಕೊಂಡು ಬರುವುದೇ ಮೋಪಾಸಾನ ಪ್ರೀತಿಯ ಕೆಲಸವಾಗಿತ್ತು. ಸ್ವಂತ ಜೀವನದ ವಿವಿಧ ಅನುಭವಗಳನ್ನು, ತನ್ನ ಕಣ್ಣೆದುರು ನಡೆದು ಹೋದಸಂಗತಿಗಳ ಚಿತ್ರಗಳನ್ನು, ಸಮಾಜದ ಎಲ್ಲ ಅಂಸಸ್ತಿನ ಸ್ಥಿತಿಗತಿಗಳನ್ನು, ತನ್ನ ಕೃತಿಗಳಲ್ಲಿ ಬಹು ಮಾರ್ಮಿಕವಾಗಿ ಚಿತ್ರಿಸಿರುವನೆಂಬುದನ್ನು ಈ ಪುಟ್ಟ ಲೇಖನದಲ್ಲಿ ವಿಸ್ತಾರವಾಗಿ ನಿರೂಪಿಸುವದು ಕಷ್ಟದ ಕೆಲಸ.

ಇವೆತ್ ಕಾದಂಬರಿಯು ೧೮೮೪ರಲ್ಲಿ ಬೆಳಕು ಕಂಡಿತು. ಇದೊಂದು ಉತ್ತಮ ಕೃತಿ. ಇಲ್ಲಿ ಮೋಪಾಸಾನ ನಿರೂಪಣ ಶಕ್ತಿಯು ಎಲ್ಲ ವಿಧದಿಂದಲೂ ಉನ್ನತ ಶಿಖರವನ್ನುಮುಟ್ಟಿದೆ. ಇದರಲ್ಲಿ ಶ್ರೀಮಂತರ ಸಿರಿವಂತಿಕೆಯ ದಬ್ಬಾಳಿಕೆಯ ನಡತೆ, ಅವರ ನೀಚ ವಿಚಾರಗಳು, ಮೋಸದ ವರ್ತನೆ, ವಿಷಯ ಲಾಲಸೆಯ ಜೀವನದಲ್ಲಿ ಹೆಚ್ಚು ಆಸಕ್ತಿ, ಹಣದ ಹಮ್ಮಿನಲ್ಲಿ ಮಾನವತೆಯನ್ನು ಮರೆಯುವ ಸೊಕ್ಕು, ಮೊದಲಾದವುಗಳನ್ನು ಕಾಣುತ್ತೇವೆ. ಕೀಳು ಜಾತಿಯ ಹೆಣ್ಣಾಗಿ ಜನಿಸಿ ಸೂಳೆಯ ವೃತ್ತಿಯಿಂದ ಗಳಿಸಿದ ಹಣದಿಂದ ಶ್ರೀಮಂತಳಾದ ಮದಾಮ ಓಬಾರ್ದಿಯು ತನ್ನ ಸ್ವಂತ ಮಗಳಾದ ಇವೆತ್‌ಳನ್ನು ತನ್ನ ಮಾರ್ಗಕ್ಕೆ ಎಳೆಯಲು ಹವಣಿಸುವ ಸ್ವಾರ್ಥಪರಾಯಣತೆಯ ಚಿತ್ರವಿದೆ ವಿಧಿಯಿತ್ತ ಕುಲ ಡೊಂಕಾದರೂ ತನ್ನ ಅರಿವಿನಿಂದ ಶೀಲವನ್ನು ಕಾದುಕೊಂಡು ತಾನೂ ಓರ್ವನ ಮನೆಯ ಹೆಣ್ಣಾಗಿ ಶಾಂತ ವಾತಾವರಣದಲ್ಲಿ ಬಾಳ ಬೇಕೆಂಬ ಇವೆತ್‌ಳ ಹಂಬಲದ ಅಲೆದಾಟ ಬಲು ಕರುಣಾಜನಕವಾಗಿದೆ. ಕೊನೆಗೆ ಇವೆತ್‌ಳ ಗುಣ ಶೀಲಗಳ ಗೆಲುವಿನೊಂದಿಗೆ ಈ ಕತೆ ಮುಗಿಯುವುದು ಈ ಬಗೆಯ ಚಿತ್ರವನ್ನು ಆಗಿನ ಫ್ರೆಂಚ್ ಸಮಾಜವು ಮನ್ನಿಸಿತು; ಸದ್ಯದ ಸಮಾಜವೂ ಮನ್ನಿಸುತ್ತಿರ ಬಹುದು. ಇಂತಹ ಚಿತ್ರ ಶಿಲ್ಪಿಯನ್ನು ದೂರುವುದೇ? ಇವನ ಕೃತಿಗಳು ಅಶ್ಲೀಲವೇ?

ಇದೇ ಹಿನ್ನೆಲೆಯಲ್ಲಿ ಮೋಪಾಸಾನನ ಕೃತಿಗಳನ್ನು ಅವನ ಕಣ್ಣಿನಿಂದ ನೋಡಿ ಸಹೃದಯ ಮನಸ್ಸಿನಿಂದ ಅರ್ಥಮಾಡಿಕೊಂಡರೆ ನನ್ನ ಈ ಕೆಲಸವು ಸಫಲವಾಯಿತೆಂದು ತಿಳಿಯುತ್ತೇನೆ.

೧೯-೭-೫೧ —ಪಿ. ವೆಂಕೋಬಾಚಾರ್ಯ

# ಇನ್ನೆ ತ್ರ್

## ೧

## ಲಿಯೋ ಸಾವಾಲ್‌ನ ಪರಿಚಯ

ಜೀನ್ ಸರ್ವೀನ್ನಿಯು ರೀಜ್ ಹೋಟೆಲಿನಿಂದ ಹೊರಬೀಳುವಾಗ ಲಿಯೋ ಸಾವಾಲನನ್ನು ಕುರಿತು, ' ಹವೆ ಬಲು ಸೊಗಸಾಗಿದೆ. ಗಾಡಿ ಯಲ್ಲಿ ಹೋಗುವುದು ಬೇಡ. ನಡೆದು ಹೋಗೋಣವೆ ? " ಎಂದು ಸೂಚಿಸಿದ.

" ಆಗಬಹುದು. ನನಗೂ ಅದು ಇಷ್ಟ. "

' ಈಗ ತಾನೇ ಹನ್ನೊಂದು ಹೊಡೆದಿದೆ. ನಾವು ಹೋಗಬೇಕೆಂದಿ ರುವ ಸ್ಥಳಕ್ಕೆ ನಡುರಾತ್ರಿ ಹೊತ್ತಿಗೆ ಸೇರಬಹುದು. ಕೊಂಚ ಸಾವಕಾಶ ವಾಗಿಯೇ ನಡೆಯುವ. "

ಬೋಲೀವಾರ್ಡದ ಹತ್ತಿರ ಜನಸಂದಣಿ ಹೆಚ್ಚಿತ್ತು. ಬೇಸಗೆಯ ರಾತ್ರಿಗಳಲ್ಲಿ ಗುಂಪುಗೂಡಿ ತಂಪಾದ ಇಂತಹ ಬಯಲು ಪ್ರದೇಶವಲ್ಲಿ ಮನದಣಿಯೆ ಕುಡಿದು, ಹೊಟ್ಟೆತುಂಬ ತಿಂದು, ನಕ್ಕು ನಲಿಯುವುದೆಂದರೆ ಪ್ಯಾರಿಸದ ಜನರಿಗೆ ಬಹು ಹಿತಕರ. ಜನಸಂದಣಿ ನದಿಯ ಹರವಿನಂತೆ ಡೊಂಕು ಡೊಂಕಾಗಿ ಹರಡಿಕೊಂಡು ಮೆಲ್ಲಗೆ ಸರಿಯುತ್ತಿತ್ತು. ರಸ್ತೆ ಯಲ್ಲಿ ಪಾನೀಯದ ಅಂಗಡಿ ಮುಂದೆ ಕುಳಿತಿದ್ದ ಹರಟೆಗಾರರ ಮೇಲೆ ಹೆಚ್ಚಿನ ಪ್ರಕಾಶದ ಬೆಳಕು ಚೆಲ್ಲಲ್ಪಟ್ಟಿತ್ತು. ಅವುಗಳ ಮುಂದೆ ಹಾಕಲ್ಪಟ್ಟ ಸಣ್ಣ ಮೇಜುಗಳ ಮುಂದೆ ಕುಳಿತು ಪಾನೀಯವನ್ನು ಸೇವಿಸುವ ಜನರ ಗುಜು ಗುಜು ಒಂದು ಬಗೆಯ ಶೋಭೆಯನ್ನುಂಟು ಮಾಡಿತ್ತು. ರಸ್ತೆ ಯಲ್ಲಿ ಹಾದುಹೋಗುವ ಕುದುರೆಗಾಡಿಗಳ ಕಡೆ, ಅದರಲ್ಲಿ ಕುಳಿತು ಹೋಗುತ್ತಿದ್ದ ಶ್ರೀಮಂತ ಯುವಕ ಯುವತಿಯರ ಕಡೆ, ಆ ಗಾಡಿಗಳ ಲಕ್ಷಣವಾದ ಕುದುರೆಗಳ ಕಡೆ ಜನರ ನೋಟ ಒಮ್ಮೊಮ್ಮೆ ಹೋಗುತ್ತಿತ್ತು.

ಈ ಗೆಳೆಯರಿಬ್ಬರೂ ಸಿಗರೇಟನ್ನು ಸೇದುತ್ತ ಹಾದಿಯಲ್ಲಿ ನಡೆದಿದ್ದರು. ಅವರ ಉಡುಪು ಸಾಯಂಕಾಲದ್ದಾಗಿದ್ದಿತು. ಹೆಗಲ ಮೇಲಿನ ಮೇಲಂಗಿ, ಕೋಟಿನಲ್ಲಿರಿಸಿದ ಮಾಟಾದ ಹೂವು, ಒಂದು ಬದಿಗೆ ಸರಿಸಿದ ಅವರ ಹ್ಯಾಟು, ನಡಿಗೆಯಲ್ಲಿದ್ದ ಮಂದಗತಿ, ಅವರಂದು ಹೆಚ್ಚು ಊಟಮಾಡಿದ್ದ ರೆಂಬುವುದನ್ನು ಸೂಚಿಸುತ್ತಿತ್ತು.

ಇವರಿಬ್ಬರೂ ಹಳೆಯ ಮಿತ್ರರು. ಚಿಕ್ಕಂದಿನಿಂದಲೂ ಕೂಡಿ ಓದಿ, ತಮ್ಮ ಎಳೆಯ ದಿನಗಳನ್ನು ಹರುಷದಲ್ಲಿ ಕಳೆದಿದ್ದರು. ವಿಶ್ವಾಸ, ಮತ್ತು ಪ್ರೀತಿಗಳಿಂದ ಬೆಳೆದು ಬಂದ ಇವರ ಸ್ನೇಹ ಮಾದರಿಯದಾಗಿತ್ತು.

ಸರ್‌ವೀನ್ನಿಯು ಉತ್ಸಾಹಿ ತರುಣನಂತೆ ಕಾಣುತ್ತಿದ್ದನು. ಕೊಂಚ ಗಿಡ್ಡ ಮತ್ತು ತೆಳುವಾದ ಅವನ ದೇಹದ ನಿಲುವು, ತೀಡಿದ ಮೀಸೆ, ಮಿನುಗುವ ಕಣ್ಣುಗಳು, ಮಾಟವಾದ ತುಟಿಗಳು. ಅವನೊಬ್ಬ ವಿಲಾಸಿ ಯೆಂಬ ಮಾತಂತೂ ಸರಿಯೆ; ಇಂತಹ ವಿಲಾಸಮಯ ಕಾರ್ಯಗಳಲ್ಲಿ ಮಗ್ನನಾಗಿ ತನ್ನ ಜೀವನವನ್ನೆಲ್ಲ ಈ ಬಗೆಯ ರಾತ್ರಿಯ ಆಟಪಾಟ ಗಳಲ್ಲಿಯೇ ಕಳೆದು, ಜೂಜಾಟ, ಕತ್ತಿಗಳಾಟ, ದ್ವಂದ್ವಯುದ್ಧ ಮುಂತಾ ದವುಗಳಲ್ಲಿ ಮಗ್ನನಾಗಿ, ಪ್ಯಾರಿಸ್ ನಗರದಲ್ಲಿಯ ಕಾಮುಕ ಮತ್ತು ರಸ ಪ್ರಿಯ ವಿಹಾರಗಳಿಂದ ತಾತ್ಕಾಲಿಕ ಶಕ್ತಿಯನ್ನು ಪಡೆದು ಸಂತೋಷದಲ್ಲಿ ನಿರತನಾದ ಯುವಕನಿವನು. ಇವನ ಮಾತುಗಾರಿಕೆ. ಹಾಸ್ಯ, ಸಂಧಾನ ಸಿದ್ಧತೆ, ಪ್ರೇಮವ್ಯವಹಾರಗಳಲ್ಲಿ ಇವನಿಗಿದ್ದ ಕುಶಲತೆ, ಎಲ್ಲ ಜನರಲ್ಲಿ ಇವನು ಬೆಳೆಸಿಕೊಂಡ ಆತ್ಮೀಯತೆ, ಶ್ರೀಮಂತರಲ್ಲಿ ಇವನಿಗಿದ್ದ ಸಲುಗೆ, ಇವುಗಳೆಲ್ಲವನ್ನೂ ನೋಡಿದರೆ, ಇವನೊಬ್ಬ ಉತ್ಸಾಹಿ ವಿಲಾಸಿಯೆಂದೇ ಹೇಳಬೇಕು.

ಪ್ಯಾರಿಸದ ವಿಟಪುರುಷನೆಂದು ಹೆಸರಾಂತ ಇವನು, ಚಂಚಲ ಸ್ವಭಾವದವನಾಗಿದ್ದನು. ಮಾತಿನಲ್ಲಿ ಹೆಚ್ಚಿನ ಹುಮ್ಮಸ, ಮುಂಗೋಪಿತನ, ಹರಟೆಕೊಚ್ಚುವ ಮಾತಿನ ರಭಸ, ಯಾವ ವಿಷಯದ ಮೇಲಾದರೂ ನಿರರ್ಗಳವಾಗಿ ಮಾತನಾಡುವ ಚಾತುರ್ಯ, ಮುಂತಾದ ಪ್ಯಾರಿಸ್ ನಗರದ ನಿವಾಸಿಗಳಲ್ಲಿ ಅವಶ್ಯ ಕಾಣಬೇಕಾದ ಗುಣಗಳು ಇವನಲ್ಲಿ ಹೆಚ್ಚಾಗಿ ಗಿದ್ದವು. ತನ್ನ ಆದಾಯಕ್ಕೆ ತಕ್ಕಂತೆ ಖರ್ಚುಮಾಡುವ ನಿಯಮ ಇವನ

ದಾಗಿತ್ತು. ವಿಲಾಸದಲ್ಲಿ ಮೈಮರೆತು ಮಗ್ನನಾಗಿ ಆರೋಗ್ಯವನ್ನು ಹಾಳು ಮಾಡಿಕೊಳ್ಳುವ ಸ್ವಭಾವ ಇವನದಾಗಿದ್ದಿಲ್ಲ. ಸಿಟ್ಟು, ಸಿಡುಕುತನ ಇವನಲ್ಲಿ ಮನೆಮಾಡಿಕೊಂಡಿದ್ದರೂ, ಜಾಣತನದಿಂದ ವರ್ತಿಸುವ ಸ್ವಭಾವ ಇವನದು ಸುತ್ತಲಿನ ವಿಲಾಸಮಯ ವಾತಾವರಣದಲ್ಲಿ, ತಾತ್ಕಾಲಿಕ ಸ್ಫೂರ್ತಿ ಎತ್ತ ಒಯ್ಯುವುದೋ ಅತ್ತ ಸರಿದು, ಅದರಂತೆ ವರ್ತಿಸಿ, ಅಂತಹ ಸನ್ನಿವೇಶಕ್ಕೆ ಹೊಂದಿಕೊಂಡು ನಡೆಯುವ ಇವನ ನಡತೆಯಲ್ಲಿ ಹೆಚ್ಚು ಅಸಂಬದ್ಧತೆ ಇರದಿದ್ದರೂ, ಜಾಣತನದಿಂದ ವರ್ತಿಸುವ ಇವನ ರೀತಿ ಬಹು ಮೋಜಿನದಾಗಿತ್ತು. ಗಾಳಿ ಎತ್ತ ಒಯ್ಯುವದೋ ಅತ್ತ ಹೋದರೂ ಅದರಿಂದ ತನಗೆ ಯಾವ ಬಗೆಯ ಹಾನಿ ಬಾರದಂತೆ,ತಾನೂ ತೊಂದರೆಗೆ ಸಿಕ್ಕಿಕೊಳ್ಳದಂತೆ ನಡೆಯುವ ಜಾಣತನ ಇವನದಾಗಿತ್ತು.

ಇವನ ಸಹಪಾಠಿಯಾದ ಲಿಯೋ ಸಾವಾಲನೊಬ್ಬ ಶ್ರೀಮಂತ. ದಾರಿಯಲ್ಲಿ ಹೋಗುವ ಹೆಂಗಳೆಯರ ದೃಷ್ಟಿ ಮನಸ್ಸುಗಳನ್ನು ತನ್ನೆಡೆಗೆ ಸೆಳೆದುಕೊಳ್ಳುವ ದೇಹಾಕೃತಿ, ಚೆಲುವು, ಮೋಹಕರೂಪ ಇವನ ದಾಗಿತ್ತು. ಎಂತಹ ಮಡಿವಂತ ಸ್ತ್ರೀಯಾದರೂ ಇವನ ದೃಷ್ಟಿಗೆ ಬಿದ್ದ ಳೆಂದರೆ ತಪ್ಪಿಸಿಕೊಂಡು ಹೋಗುವುದು ಅಸಾಧ್ಯವೇ ಸರಿ ಪ್ರದರ್ಶನಕ್ಕೆ ಕಳಿಸಲು ನಿರ್ಮಿಸಿದ ಭವ್ಯ ಶಿಲ್ಪದಂತೆ ಇವನ ಸುಂದರರೂಪು ಬಲು ಮನ ಮೋಹಕ; ಎತ್ತರವಾದ ದೇಹಾಕೃತಿ, ಪುಷ್ಟವಾದ ಮೈಕಟ್ಟು, ಶಿಲಾವಿಗ್ರ ಹದ ಶಕ್ತಿಯನ್ನು ಪಡೆದಿತ್ತು. ಆದರೆ ಅವನೊಬ್ಬ ಅತಿ ಕಾಮಿ; ಸ್ವಲ್ಪದ ರಲ್ಲೇ ತೃಪ್ತಿ ಹೊಂದುವ ಸ್ವಭಾವದವನಲ್ಲ. ಅನೇಕ ಯುವತಿಯರ ಹೃದ ಯಗಳನ್ನು ಅಪಹರಿಸಿ,ಅವರನ್ನು ಭಗ್ನ ಮನೋರಥರನ್ನಾಗಿ ಮಾಡಿದ್ದನು. ಇವರಿಬ್ಬರೂ ವಾಡಿವಿಲ್ಲೇ ಎಂಬ ತೋಟವನ್ನು ಸಮೀಪಿಸಿದರು.

"ಜೀನ್, ನಿನ್ನೊಂದಿಗೆ ನನ್ನನ್ನೂ ಕರೆದುಕೊಂಡು ಬರುವೆನೆಂದು ಆಕೆಗೆ ಮುಂಚಿತವಾಗಿಯೇ ತಿಳಿಸಿರುವೆಯಾ ?"

ಅವನು ನಕ್ಕು ಸುಮ್ಮನಾದ.

"ಅದೇನೂ ಅವಶ್ಯವಿಲ್ಲ. ಅಲ್ಲಿಗೆ ಯಾರೂ ಯಾವ ಸಮಯದಲ್ಲಾ ಹೋಗಬಹುದು.

"ಅದಿರಲಿ. ನಾವು ಹೋಗುತ್ತಿರುವ ಆ ಮಹಾರಾಯಳ ಪರಿಚಯ

ವಾದರೂ ಮುಂಚಿತವಾಗಿ ಮಾಡಿಕೊಡು" ಎಂದು ಆಶ್ಚರ್ಯದಿಂದ ಲಿಯೋ ಸಾವಾಲನು ಕೇಳಿದ.

"ನನಗೂ ಅವಳ ಪರಿಚಯವಾದುದು ವಿಲಕ್ಷಣ ಸಂದರ್ಭದಲ್ಲಿ. ಅವಳಾರೋ ನನಗೆ ತಿಳಿದಿರಲಿಲ್ಲ; ಅವಳಿಗೂ ನನ್ನ ಪರಿಚಯವಿರಲಿಲ್ಲ. ಸೇರಿದ ಜನಸಮೂಹದಲ್ಲಿ ಮೋಹಜಾಲ ಬೀರಿ ಮನ ಸೆಳೆಯುವ ಜಾಣತನ ಅವಳದು. ಅವಳು ಅವಿವಾಹಿತಳಾಗಿಯೇ ಉಳಿದಿರುವಳಂತೆ. ಶ್ರೀಮಂತರೆಲ್ಲರಗೂ ಪರಿಚಿತಳೇ. 'ಒಕ್ಸೋವ್ ಬಾರ್ದಿ' ಎಂಬ ಎರಡು ಹೆಸರುಗಳನ್ನು ಮಿಶ್ರಮಾಡಿ 'ಓಬಾರ್ದಿ' ಎಂದು ಹೆಸರಿಟ್ಟು ಕೊಂಡಿರುವಳು.ನಿನಗೆ ಸರಿಜೋಡಾಗುವ ಗುಣಗಳು ಅವಳಲ್ಲಿವೆ.ನಿನ್ನನ್ನು ಕಂಡಕೂಡಲೇ ಅವಳು ಖಂಡಿತವಾಗಿ ಪ್ರೀತಿಸುವಳು. ಓಡಿ ಬಂದು ತಾನಾಗಿಯೇ ಪರಿಚಯ ಮಾಡಿಕೊಳ್ಳುವಳು. ಅವಳ ಮನೆ ಅದೊಂದು ಅಂಗಡಿ ಇದ್ದಂತೆ. ಯಾರಾದರೂ ಅಲ್ಲಿಗೆ ಹೋಗಬಹುದು. ಯೌವ್ವನ ಮತ್ತು ಹಣವಿದ್ದರೇನೇ ಅಲ್ಲಿ ಮರ್ಯಾದೆ. ಇಲ್ಲದಿದ್ದರೆ ನಮ್ಮನ್ನು ಯಾರೂ ಮಾತನಾಡಿಸುವುದಿಲ್ಲ. ಏಕೆ ಬಂದಿರಿ, ಏಕೆ ಹೊರಟಿರಿ, ಎಂದು ಕೇಳುವವರೂ ವಿರಳ. ಹಣದ ಜೊತೆಗೆ ಪ್ರೀತಿ ಪ್ರೇಮಗಳೂ ಹೆಚ್ಚು ಪ್ರಮಾಣದಲ್ಲಿದ್ದರೆ ಆದಕ್ಕೆ ವಿಶಿಷ್ಟ ಆದರ ಅಲ್ಲಿ ದೊರೆಯುವುದು.

"ಏಟೋಲಿ ಪ್ರದೇಶದಲ್ಲಿ ಅವಳೊಂದು ಮನೆ ಬಾಡಿಗೆಗೆ ಹಿಡಿದು ಈಗ ಮೂರು ವರುಷಗಳಾದವು. ಹೆಚ್ಚು ನಾಗರಿಕರಿರುವ ಪ್ರದೇಶವಲ್ಲ. ಸಂಜೆ ಸಮಯಗಳಲ್ಲಿ ಪ್ಯಾರಿಸ ನಗರದ ವಿಶಾಲ ಜನಸಂದಣಿಯ ವಿಹಾರ ಸ್ಥಳಗಳಿಗೆ ಬಂದು, ತಮ್ಮ ಶರೀರ ವಿಕ್ರಯದಿಂದ ಹಣಗಳಿಸಿ, ಸುಖಲೋಲುಪರಾಗಿ ರಾತ್ರಿ ಹೊತ್ತಾದ ಮೇಲೆ, ಮನೆಗೆ ಹಿಂತಿರುಗುವ ಇಂಥ ಜನರು ವಾಸಿಸುವ ಸ್ಥಳವು ಪಕ್ಕದಲ್ಲೇ ಇದೆ.

"ನಾನವಳ ಮನೆಗೆ ಹೇಗೆ ಹೋದೆನೆಂಬುವುದು ನನಗೆ ನೆನಪಿಲ್ಲ, ಎಲ್ಲರೂ ಪ್ರವೇಶಿಸುವಂತೆ ನಾನವಳ ಮನೆಗೆ ಹೋದೆ.ಅಲ್ಲಿ ಇಸ್ಪೇಟು ಆಟ, ಮತ್ತು ಮನಸ್ಸನ್ನಾಕರ್ಷಿಸುವ ನವಸುಂದರಿಯರೂ ಇದ್ದುದರಿಂದ ವಿಲಾಸ ಪ್ರಿಯರು ಅಲ್ಲಿಗೆ ಹೋಗುವುದು ರೂಢಿಯೇ. ಅಲ್ಲಿ ನೆರೆಯುತ್ತಲಿದ್ದ ಸ್ತ್ರೀ-ಪುರುಷರು ವಿಲಾಸಪ್ರಿಯರಾದುದರಿಂದ ಅವರ ಸ್ನೇಹವು ಸ್ವಲ್ಪ ವೇಳೆ

ಯಲ್ಲೇ ಆಗಿ ಬಿಡುತ್ತಿತ್ತು. ಅಲ್ಲಿ ನಾನಾ ದೇಶದ ಶ್ರೀಮಂತರು, ದೊಡ್ಡ ಸರಕಾರೀ ಹುದ್ದೇದಾರರು, ಪ್ರತಿಷ್ಠಿತರು, ರಾಜ ಮನೆತನದವರೂ ಸೇರುತಿದ್ದರು. ಅನ್ಯ ದೇಶದ ಗುಪ್ತಚಾರರಿಗೆ ಮಾತ್ರ ಅಲ್ಲಿ ಪ್ರವೇಶವಿರುತ್ತಿರಲಿಲ್ಲ. ಅಂಥ ಜನರು ಯಾರಾದರೂ ಬಂದರೆಂದರೆ, ಅದನ್ನು ಕೂಡು ಹಿಡಿದು ಗೊಂದಲವೆಬ್ಬಿಸಿ ಹೊರದೂಡುತಿದ್ದರು. ಕುಡಿತದ ಗುಂಗಿನಲ್ಲಿ ವೈನುರೆತು ಹರಟೆ ಕೊಚ್ಚುವಾಗ ಅವರ ಮನೆತನದ ರಹಸ್ಯ ವಿಷಯಗಳೆಲ್ಲ ಹೊರ ಬರುತ್ತಿದ್ದುವು. ಅವರ ಜೀವನದ ಪೊಳ್ಳುತನ, ಅಂತಸ್ತಿನ ನೀಚತನ, ಜೀವನದಲ್ಲಿ ಅವರು ನಡೆಸಿದ ಘೋರ ಕೃತ್ಯಗಳು, ಮನೆತನವನ್ನು ಹಾಳು ಮಾಡಿದ ವಿವರಗಳೆಲ್ಲವೂ ತಿಳಿದು ಬರುತ್ತಿದ್ದುವು. ಇವರ ರೀತಿ ಎಂಥವರನ್ನೂ ಬೆರಗುಗೊಳಿಸುತಿತ್ತು. ಒಂದೇ ಮಾತಿನಲ್ಲಿ ಹೇಳುವುದಾದರೆ, ಶ್ರೀಮಂತಿಕೆಯ ಸೋಗಿನಲ್ಲಿ ಜನತೆಯನ್ನು ಮೋಸ ಮಾಡಿ, ಗಲ್ಲಿಗೆ ಆಹುತಿಯಾಗಲೂ ಸಹ ಸಿದ್ಧವಿದ್ದ ತುಂಟರ ತಂಡವೆಂದರೆ ತಪ್ಪಲ್ಲ.

" ಅವರೊಂದು ವಿಶಿಷ್ಟ ಜನಾಂಗವೆಂದು, ಹೆಚ್ಚು ಸಲ ಅವರ ನಡೆನುಡಿಗಳಿಂದ ಮನಶ್ಶಾಸ್ತ್ರದ ಅಭ್ಯಾಸಕ್ಕೆ ಒಳ್ಳೇ ಸಲಕರಣೆ ದೊರೆಯುವುದೆಂದು, ನಾನು ಅನೇಕ ಸಲ ಅಲ್ಲಿಗೆ ಹೋಗುತ್ತಿದ್ದೆ. ಅಲ್ಲಿಗೆ ಹೋಗಿ ಅವರ ಮಾತುಕತೆಗಳಲ್ಲಿ ಭಾಗವಹಿಸುವುದು ಆನಂದದ ವಿಷಯವಾಗಿತ್ತು. ಫ್ರೆಂಚ್‌ಸರಕಾರದ ಅನೇಕ ಹಿರಿಯ ಉದ್ಯೋಗಿಗಳ ಪರಿಚಯ ಅಲ್ಲಿ ನನಗಾಗುತ್ತಿತ್ತು. ಮೊದಲಿಗೆ ವಿಲಾಸ ಪ್ರಿಯರಾಗಿದ್ದು, ಈಗ ಸತಿ-ಪತಿಯರೆಂಬ ಬಿರುದಾವಳಿಯಿಂದ ಹೊರ ಜಗತ್ತಿಗೆ ಕಂಡು ಬರುತ್ತಿರುವ ಇವರ ಜೀವನದ ಒಳನೋಟದ ವಿವರಗಳು ಬಲು ವಿನೋದಮಯ ಮತ್ತು ಮಹತ್ವದ್ದಾಗಿದ್ದುವು. ಅವರ ಸತಿಯರು ದೊಡ್ಡ ಕಣ್ಣಿನ ಹಿರಿ ಕೂದಲದವರಾಗಿದ್ದು, ವೇಶ್ಯೆಯ ವ್ಯವಹಾರಕ್ಕೆ ಯೋಗ್ಯವಾದ ದೃಢಕಾಯರಾಗಿದ್ದು, ಮೋಹಕ ರೂಪವುಳ್ಳವರಾಗಿದ್ದರು. ಯುವಕರನ್ನು ಆಕರ್ಷಿಸುವ ಇವರ ಕಾಮದೃಷ್ಟಿ ಅನೇಕರನ್ನು ಮರುಗು ಗೊಳಿಸುತ್ತಿತ್ತು. ಅಮಾಯಕರ ಮೇಲೆ ದಾಳಿ ಹೊರಟ ಇವರ ದಾಳಿಗಳ್ಳತನ ಅತಿ ಹೇಯವೇ ಸರಿ.

"ಶ್ರೀಮಂತಳಾದ ಶ್ರೀಮತಿ ಓಬಾರ್ದಿಯು ಇಂಥ ಸ್ತ್ರೀಯೊಬ್ಬಳೆಂದರೆ ತಪ್ಪಲ್ಲ. ಸ್ವಲ್ಪವಯಸ್ಸಾಗಿದ್ದರೂ ಚೆಲುವೆ; ಅವಳಲ್ಲಿಯ ಮೋಹಕ ಶಕ್ತಿ

ಪಾಶವೀ ಸೌಂದರ್ಯ ಅವಳ ಕಾಮ ಪ್ರೇರಣೆಯ ಈ ಚೆಲುವು ಅಮೋಘ ವಾದುದು. ಅವಳ ಮನೆಯೊಂದು ವಿಲಾಸಿಗಳ ನೃತ್ಯಶಾಲೆ; ಕಾಮ ಕ್ರೀಡೆಗಳ ಮೋಹ ಜಾಲಗಳ ಸೆರೆಮನೆ; ಸುರಾಪಾನ,ಆಟಪಾಟಗಳ ತವರು ಮನೆ.''

" ನೀನವಳನ್ನು ಪ್ರೀತಿಸಿರುವೆಯಾ? ಇಲ್ಲವೇ ಅವಳೇ ನಿನ್ನನ್ನು ಪ್ರೀತಿಸಿರುವಳೆ ? ಅವಳ ಸಹವಾಸದ........"

'' ಛೆ, ಛೆ. ನಾನವಳನ್ನು ಆಶಿಸುವುದಿಲ್ಲ, ಸಾವಾಲ್. ನನ್ನನ್ನು ಆಕರ್ಷಿಸುತ್ತಿರುವುದು ಅಲ್ಲಿಯ ಸುಮನೋಹರ ರೂಪಿನ ಪುತ್ಥಳಿ ಬೊಂಬೆ ಅವಳ ಮಗಳು."

'' ಓ, ನನಗೀಗ ಅರ್ಥವಾಯಿತು. ಅವಳಿಗೊಂದು ಮಗಳು! ಅವಳನ್ನು ನೀನು ಆಶಿಸಿರುವಿ! "

'' ನಿಸ್ಸಂಶಯವಾಗಿ; ಅವಳೊಬ್ಬ ರಂಭೆ. ಅವಳ ಚೆಲುವಿಗೆ ನಾನು ಸೋತು ಹೋಗಿರುವೆ. ಎತ್ತರವಾದ ತೆಳುವಾದ ಮೈಕಟ್ಟು,ನಗುವಿನಲ್ಲಿಯೇ ತನ್ನ ಜೀವನವನ್ನು ತೇಲಿಬಿಡುವಂತಿರುವ ಅವಳ ಹಗುರವಾದ ಶರೀರವನ್ನು ನರ್ತಿಸುವಾಗ ನೋಡಬೇಕು.ಅದೊಂದು ಅನುಪಮ ದೃಶ್ಯ. ನೃತ್ಯವೆಂದರೆ ಅವಳಹಿಗ್ಗು ಹೇಳತೀರದು.ತನ್ನ ಸರ್ವಸ್ವವನ್ನೇ ನೃತ್ಯಕಲೆಗಾಗಿ ಮೀಸಲಾಗಿಟ್ಟು ಬಿಡಲು ಅವಳು ಸಿದ್ಧಳು.ವಿಶಾಲವಾಗಿ ಅರಳಿದ ಅವಳ ಕಣ್ಣುಗಳು ನಸುನಗುವಿನಿಂದ ಪ್ರಿಯಕರನನ್ನು ಆ ಮಂತ್ರಿಸುತ್ತವೆ.ಸುಖದ ಪೂರ್ಣಾನಂದವನ್ನು ತಂದೊಡ್ಡುವ ಅವಳ ಚೆಲುವಾದ ಸುಂದರ ಮುಖ ನೋಡಿದ ಮೇಲೆ, ಮತ್ತೋರ್ವ ಹೆಣ್ಣನ್ನು ಯಾರೂ ಆಶಿಸುವುದಿಲ್ಲ. ಅವಳನ್ನು ಸತಿಯಾಗಿ ಪಡೆಯುವವನೇ ಪರಮ ಪುಣ್ಯಜೀವಿ. ಅವಳನ್ನು ತನ್ನವಳನ್ನಾಗಿಸಲು ಹಾತೊರೆಯುವವರು ಹತ್ತು ಯುವಕರಿರುವರು. ಹದಿನೆಂಟು ವಯಸ್ಸಿನ ಆ ಯುವತಿಯನ್ನು ಪಡೆಯಲು ಆಶಿಸುವವರಲ್ಲಿ ನಾನೊಬ್ಬನು.

'' ಇಂತಹ ಸುಂದರಿಯನ್ನು ಮಗಳನ್ನಾಗಿ ಪಡೆದ ಆ ತಾಯಿಯ ಅದೃಷ್ಟವೆಂತಹದೆನ್ನಬೇಕು ? ಅದೃಷ್ಟದ ಆಟದಲ್ಲಿ ಇವರಿಬ್ಬರೂ ಅನೇಕ ಶ್ರೀಮಂತರನ್ನು ತಮ್ಮ ಕೈಗೊಂಬೆಯಾಗಿಸಿ ಕುಣಿಸುತ್ತಿರುವರು. ಇವರ ರೂಪದ ಬಲೆಯಲ್ಲಿ ಸಿಲುಕಿ ಕುಣಿಯುತ್ತಿರುವ ಅನೇಕ ಶ್ರೀಮಂತ ಯುವ

ಕರು ಆಗಲೇ ತಮ್ಮದೆಲ್ಲವನ್ನೂ ಅವರಿಗೆ ಅರ್ಪಿಸಲು ಸಿದ್ಧರಾಗಿರುವರು. ಕೆಲವರಂತೂ ಆಶಾಗೋಪುರಗಳನ್ನು ನಿರ್ಮಿಸಿ ಆ ಅಭ್ಯುದಯದಲ್ಲಿ ಸಾಕಷ್ಟು ಹಣವ್ಯಯ ಮಾಡಿಕೊಂಡಿರುವರು. ನನಗೆ ಅವಳನ್ನು ಪಡೆಯುವ ಆಶೆ ಬಹಳ ಇದೆ. ಅವಳನ್ನು ಪಡೆಯಲು ನನ್ನೆಲ್ಲ ಐಶ್ವರ್ಯವನ್ನೇ ಅವಳ ಸೊತ್ತಾಗಿಸಲು ಸಿದ್ಧನೇ ಸರಿ ಅವಳ ಸಮ್ಮತಿಯೊಂದು ದೊರೆತರೆ ನಾನು ಧನ್ಯನೆಂದು ನೆನೆಯುತ್ತೇನೆ."

"ಅವಳ ಹೆಸರು ಇವೆತ್. ಏನು ಸೊಬಗಿದೆ ಆ ಹೆಸರಿನಲ್ಲಿ? ನನ್ನ ಜೀವನದ ಮೇಲೆ ಅದೊಂದು ಮಾಯೆಯ ಜಾಲವನ್ನು ಬೀಸಿದೆ. ಅವಳ ರೂಪದ ಅವನ್ನು ಅರಿಯುವುದು ನನಗೊಂದು ಪ್ರಬಲ ಪ್ರಶ್ನೆಯಾಗಿದೆ. ಅವಳೆಷ್ಟು ಚೆಲುವಿನ ಮೂರ್ತಿಯಾಗಿರುವಳೋ ಅಷ್ಟೇ ಮುಗ್ಧಳೂ ಆಹು ದೆಂದು ನನ್ನ ಕಲ್ಪನೆ. ಆ ಮುಗ್ಧತೆ ಅವಳ ಚೆಲುವಿಗೆ ಮೆರುಗು ಕೊಟ್ಟಂತಾಗಿ ಕಾಮುಕರನ್ನು ಹೆಚ್ಚು ಉದ್ರೇಕಾವಸ್ಥೆಗೆ ಈಡು ಮಾಡು ತ್ತಿರುವುದು ಸಹಜ. ಈ ಸ್ಥಿತಿಯಲ್ಲಿ ಇರುವ ಈ ಮೋಹಕನ್ನಿಕೆಯ ಶಾಂತ ಸ್ವಭಾವ, ಅವಳ ಹಿತಮಿತದ ಮಾತು, ಮುದ್ದಾದ ಕೆಂದುಟಿಗಳಿಂದ ಹೊರ ಬರುವ ಸ್ವರಮಿಳಿತ ಮೃದುವಚನಗಳು, ಎಲ್ಲವೂ ಮನಮೋಹಕವೆನ್ನ ಬೇಕು. ಇಂತಹ ಮೂರ್ತಿ ಯಾವುದೋ ಒಂದು ರಾಜರ ಮನೆಯಲ್ಲಾಗಲಿ ಇಲ್ಲವೆ ಜನಸಾಮಾನ್ಯರಿಗೆ ನಿಲುಕದಂಥ ಹಿರಿಯ ಶ್ರೀಮಂತ ಮನೆತನ ದಲ್ಲಿಯೇ ಆಗಲಿ, ಮಾನವನ ಕಲ್ಪನೆಗೆ ಮೀರಿದ ಮತ್ತೊಂದು ಜಗತ್ತಿ ನಲ್ಲಾಗಲಿ, ಜನನವಾಗಿರಬೇಕೆಂದು ನನಗೆನಿಸುತ್ತದೆ. ಇಂತಹ ದೈವ ಶಿಲ್ಪವನ್ನು ನೀನೇ ನೋಡುವೆ. ನನ್ನ ವರ್ಣನೆ ಅವಳ ಚೆಲುವಿನ ಮುಂದೆ ಅಣಕವೇ ಸರಿ."

ಸಾವಾಲನು ನಗುತ್ತ "ತಿಳಿಯಿತಯ್ಯಾ. ನಿನ್ನ ಈ ವರ್ಣನೆಯನ್ನು ಕೇಳಿದರೆ ನಿನ್ನ ಹೃದಯದ ಆರ್ತಿಕೆ ಏನೆಂಬುವುದು ಅರ್ಥವಾಗುತ್ತದೆ. ಸರಿ ನೀನವಳನ್ನು ಅತಿಯಾಗಿ ಪ್ರೀತಿಸುವೆ; ಅವಳೂ ನಿನ್ನನ್ನು ಪ್ರೀತಿಸು......

"ಛೆ... ಛೇ.... ಇನ್ನೂ ಅದು ನಿರ್ಧಾರವಿಲ್ಲ. ಅವಳೊಂದಿಗೆ ಮಾತ ನಾಡಿ ನನ್ನ ಪ್ರೇಮವನ್ನು ವ್ಯಕ್ತಗೊಳಿಸುವ ಅವಕಾಶ ಇನ್ನೂ ದೊರೆತಿಲ್ಲ. ಆದರೆ ನನ್ನೊಂದಿಗೆ ಈ ವ್ಯಾಧಿಗೆ ತುತ್ತಾದ ಇನ್ನಿತರ ಯುವಕರ ಪರಿಚಯ

ನಿನಗೆ ಮಾಡಿಕೊಡುವೆ. ಅವರಲ್ಲಿ ನಾನೇ ಉತ್ತಮನೆಂಬ ಧೈರ್ಯ ನನಗಿದೆ ಅವರೆಲ್ಲರಿಗಿಂತಲೂ ನನಗೇ ಅವಳು ದೊರೆಯಬಹುದೆಂದು ನನಗೆ ಅತಿ ವಿಶ್ವಾಸವಿದೆ."

"ಅಂದರೆ ಅವಳು ನಿನ್ನನ್ನು ಮೋಹಿಸಿರುವಳೆಂದು ನೀನು ತಿಳಿದು ಅವಳನ್ನು ಹೆಚ್ಚಾಗಿ ಪ್ರೀತಿಸುತ್ತಿರುವೆಯಾ? ನಿನ್ನ ಹೃದಯದ ಭಾವನೆಗಳನ್ನು ಬಿಡಿಯಾಗಿ ಹೇಳಿಬಿಡು. ಮುಚ್ಚುಮರೆ ಬೇಡ. ನಿನ್ನ ಹೃದಯದ ವೇದನೆಯನ್ನು ಹೇಳಿಬಿಡು."

ಸರ್ಗೀನ್ನಿಯು ಹೆಜ್ಜೆ ಹಾಕುತ್ತ ಸುಮ್ಮನಿದ್ದುಬಿಟ್ಟ.

"ಸಾವಾಲ್ ಅವಳನ್ನು ಪ್ರೀತಿಸುವುದಿಲ್ಲವೆಂದು ಹೇಗೆ ಹೇಳಲಿ? ಅವಳ ನೆನಪು ಪ್ರತಿಕ್ಷಣವೂ ಆಗುತ್ತಿದೆ. ಅವಳನ್ನು ಬಹು ಅಕ್ಕರೆಯಿಂದ ಪ್ರೀತಿಸುತ್ತಲಿರುವೆನೆಂದು ಹೇಳಿದರೂ ತಪ್ಪಲ್ಲ. ಕನಸಿನಲ್ಲಿ, ನನಸಿನಲ್ಲಿ, ನಿದ್ದೆಯಲ್ಲಿ, ಎಚ್ಚರದಲ್ಲಿ, ಸದಾ ಅವಳ ಚೆಲುವಾದ ರೂಪು ಎದುರು ಬಂದು ನಿಲ್ಲುತ್ತದೆ. ಅವಳ ಸುಂದರ ಮುಖದಲ್ಲಿಯ ಅನಗುವಿನ ಛಾಯೆ ನನ್ನೆದುರು ಬಂದು ನಿಲ್ಲುತ್ತಿದೆ. ನಾನೆಲ್ಲಿ ಹೋದರೂ ಅದನ್ನು ಮರೆಯುವಂತಿಲ್ಲ. ಈ ಬಗೆಯಾಗಿ ಅವಳ ಮೇಲಿನ ಈ ವ್ಯಾಮೋಹವನ್ನೇ ನಾವು ಪ್ರೇಮವೆಂದು ಕರೆಯುವೆವಲ್ಲವೆ ? ಅವಳ ಚೆಲುವಿನ ಪ್ರಭಾವದಿಂದ ನಾನು ಹುಚ್ಚನಾಗಿದ್ದೇನೆ. ಕಣ್ಣುಮುಚ್ಚಿದಕೂಡಲೇ ಅವಳ ರೂಪು ಎದುರು ಬಂದು ನಿಲ್ಲುತ್ತದೆ. ಅವಳು ಬಂದು ನಿಂತ ಕೂಡಲೇ ನನ್ನೆದೆ ವೇಗದಿಂದ ಹೊಡೆದುಕೊಳ್ಳುತ್ತದೆ. ನನ್ನ ಈ ಹುಚ್ಚು ವರ್ತನೆಗೇನೆನ್ನಬೇಕು ?

"ಅವಳಲ್ಲಿ ನನಗಿರುವ ಪ್ರೇಮ ಒಂದು ರೀತಿಯದು. ಅವಳನ್ನು ಅತಿಯಾಗಿ ಪ್ರೀತಿಸುವೆ. ಆದರೆ ಅವಳನ್ನು ಹೆಂಡತಿಯಾಗಿ ಆರಿಸಿಕೊಳ್ಳುವ ಯೋಚನೆ ಬಂದಾಗ ಮಾತ್ರ ನನ್ನೆದೆ ನಡುಗುವುದು. ಇಂತಹಳನ್ನು ಮದುವೆಯಾಗುವದು ಮೂರ್ಖತನವೆಂತಲೂ, ಅವಮಾನದ ಕಾರ್ಯವೆಂತಲೂ ತಿಳಿದು ಬರುವುದು. ಅದೊಂದು ಅಸಂಭವನೀಯವಾದ ವಿಷಯವೆಂದು ನನ್ನ ಭಾವನೆ. ಅವಳನ್ನು ಕಂಡರೆ ನನಗೊಂದು ರೀತಿಯ ಭಯ! ಇದರ ಕಾರಣ ನನಗೆ ತಿಳಿಯದಾಗಿದೆ.

"ಅವಳನ್ನು ಕಂಡರೆ ನನಗೇಕೋ ಜಿಗುಪ್ಸೆ. ಆ ಜಿಗುಪ್ಸೆಗೆ ಕಾರಣ

ಅವಳ ಅತಿ ಸುಂದರವಾದ ಮುಖ. ಅವಳ ಆ ಚೆಲುವಿಗೆ ನಾನು ಮನ ಸೋತುವಲ್ಲದೆ, ಅವಳನ್ನೇ ಇಷ್ಟು ಚೆಲುವೆಯನ್ನಾಗಿಸಿದುದಕ್ಕೆ ನಾನು ದೇವರ ಮೇಲೆ ಕೋಪಗೊಂಡಿದ್ದೇನೆ. ಅವಳ ಮನಮೋಹಕ ಸೌಂದರ್ಯ ಸಹಜವೇ ಇಲ್ಲವೆ ಕೃತ್ರಿಮವೇ ಎಂಬ ತರ್ಕದಲ್ಲಿ ನಾನು ಬೀಳುವುದಲ್ಲದೆ, ಅವಳು ನಿಜವಾಗಿಯೂ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡಿರುವಳೇ ಇಲ್ಲವೇ ಎಂಬ ವಿಷಯ ನನ್ನನ್ನು ಯೋಚನೆಯಲ್ಲಿ ಬೀಳಿಸುತ್ತದೆ. ಅವಳ ಮಾತಿನ ಓಟ ಅತಿ ಪೌರುಷಯುಕ್ತವಾಗಿ ಒಂದು ಸೇನೆಯನ್ನೇ ಚದುರಿಸುವಂತಹದು; ಆದರೆ ಅದರಲ್ಲಿ ಕೋಗಿಲೆಯ ಕೋಮಲತೆಯೂ ಅಡಗಿದೆ. ಅವಳ ಸೌಜನ್ಯ ಒಂದು ಕಡೆ, ಚಪಲ ಸ್ವಭಾವ ಮತ್ತೊಂದು ಕಡೆ, ಅವಳಲ್ಲಿಯ ವಿರುದ್ಧ ಸ್ವಭಾವವನ್ನು ವ್ಯಕ್ತಗೊಳಿಸುತ್ತವೆ. ಅವಳು ನೀತಿವಂತಳಾಗಿರಬೇಕೆಂಬ ನಿರ್ಧಾರಕ್ಕೆ ಬರುವುದರೊಳಗೆ, ಇರಲಾರಳೆಂಬ ಸಂಶಯ ತಲೆದೋರುವುದು. ಅವಳ ರೂಪು ಚೆಲುವು ನನ್ನನ್ನು ಉದ್ರೇಕಗೊಳಿಸುವುದಲ್ಲದೆ, ಅವಳು ನಿರ್ಮಲ ಕುಸುಮದಂತಿರಬೇಕೆಂಬ ಭಾವನೆ ನನ್ನನ್ನು ಆವರಿಸುತ್ತದೆ. ಅವಳು ನನ್ನನ್ನು ಪ್ರೀತಿಸುವಳೇನೋ ಎಂಬಂತೆ ಕಂಡು ಬಂದರೂ, ಕುಚೇಷ್ಟೆ ಮಾಡುತ್ತಿರುವಳೇನೋ ಎಂಬ ಸಂಶಯ ನನ್ನನ್ನು ಆವರಿಸುತ್ತದೆ. ಎಲ್ಲರೆದುರಿಗೆ ಗೆಳತಿಯಂತೆ ವರ್ತಿಸುತ್ತಿದ್ದ ಅವಳು ನಾವಿಬ್ಬರೇ ಇದ್ದಾಗ ನನ್ನನ್ನು ಆಳಿಗಿಂತಲೂ ಹೀನವಾಗಿ ಕಾಣುತ್ತಿದ್ದಳು.

"ಒಂದೊಂದು ಸಲ ಅವಳ ತಾಯಿಗಿದ್ದಷ್ಟು ಪ್ರೇಮದ ಗೆಳೆಯರು ಇವಳಿಗೂ ಇರುವರೆಂದು ಭಾವಿಸುತ್ತಿದ್ದೆ. ಆದರೆ ಅದು ಸುಳ್ಳೆಂದು ಭಾವಿಸಲು ನನಗೆ ಕಾರಣಗಳು ದೊರೆತಿರುವದರಿಂದ ಕೊಂಚ ಸಮಾಧಾನವಾಗಿದೆ. ಕಾದಂಬರಿಗಳನ್ನು ಓದುವುದೆಂದರೆ ಅವಳಿಗೆ ಬಹು ಇಷ್ಟ. ಅವಳಿಗೆ ಪುಸ್ತಕಗಳನ್ನೊದಗಿಸುವುದೇ ನನ್ನ ಪ್ರಸ್ತುತದ ಕೆಲಸ. ನಾನವಳ ಪುಸ್ತಕದ ಸಂಗ್ರಹಕಾರ. ಪ್ರತಿವಾರವೂ ಹೊರಬಿದ್ದ ಹೊಸ ಪುಸ್ತಕಗಳನ್ನು ಅವಳು ನನ್ನಿಂದ ತರಿಸಿಕೊಳ್ಳುವಳು. ಅವುಗಳನ್ನು ಸೂಕ್ಷ್ಮವಾಗಿಓದುವ ಪರಿಪಾಠ ಅವಳದಲ್ಲ; ಅವಸರದಿಂದ ಎಲ್ಲವನ್ನೂ ಓದಿಮುಗಿಸುವುದು ಅವಳಿಗೆ ಹಿತದ ಕೆಲಸವು. ಈ ಬಗೆಯ ಅವಸರದ ಓದುವಿಕೆ ಅವಳ ಮನಸ್ಸಿನಮೇಲೆ ಒಂದು ಬಗೆಯ ಪರಿಣಾಮವನ್ನುಂಟು ಮಾಡಿರಲಿಕ್ಕೆ ಸಾಕು. ಅವಳು ಅತಿ

ಚಂಚಲ ಸ್ವಭಾವದವಳಾಗುವುದಕ್ಕೆ ಇದುವೇ ಕಾರಣವಾಗಿರಬೇಕು. ಪ್ರಪಂಚವನ್ನು ಪೂರ್ಣ ತಿಳಿಯದ ಯುವತಿ ಹದಿನೈದು ನೂರು ಕಾದಂಬರಿಗಳನ್ನು ಓದಿರಬೇಕಾದರೆ ಅದರ ಪರಿಣಾಮ ಅವಳ ಮನಸ್ಸಿನ ಮೇಲೆ ಹೇಗೆ ಆಗಿರಬೇಕೆಂಬುದನ್ನು ಬೇರೆ ಸೂಚಿಸಬೇಕಿಲ್ಲ. ಪ್ರಪಂಚದ ಬಗ್ಗೆ ಅವಳ ಭಾವನೆಗಳು ಅವಳಲ್ಲಿ ಅಶಾಂತತೆ, ಅತೃಪ್ತಿಯನ್ನುಂಟು ಮಾಡಿರುವುದು ಸಹಜವೇ ಸರಿ. ಅವಳ ಈ ವಿಧವಾದ ವರ್ತನೆ ಯಾವ ದಾರಿಯನ್ನು ಹಿಡಿಯುವುದೆಂದು ಆಲೋಚಿಸುತ್ತಲಿದ್ದೇನೆ; ಅವಳನ್ನು ದೇವತೆ ಯಂತೆ ನಾನು ಆರಾಧಿಸುತ್ತಲಿದ್ದೇನೆ; ಪ್ರೇಮಮೂರ್ತಿಯೆಂದು ಪೂಜಿಸು ತ್ತಲಿದ್ದೇನೆ. ಇಷ್ಟಾದರೂ ಅವಳನ್ನು ಮದುವೆಯಾಗುವುದು ಅಸಾಧ್ಯ ವೆಂದು ನನ್ನ ಮನಸ್ಸೇಕೋ ಹೇಳುತ್ತದೆ. ಅವಳನ್ನು ಆರಾಧಿಸುವ ಕಾಮು ಕರಲ್ಲಿ ನಾನೊಬ್ಬನೇ ಹೊರತು, ಹೆಂಡತಿಯಾಗಿ ಸುಖಪಡೆಯುವ ಪ್ರಸಂಗ ನನ್ನದಲ್ಲವೆಂದೇಕೋ ನನ್ನ ಮನಸ್ಸು ಹೇಳುತ್ತಿದೆ. ಅವಳಿಂದ ಇಂತಹ ಬಲವಂತದ ಸಲಹೆ ಏನಾದರೂ ಬಂದರೆ, ಜಾಣತನದಿಂದ ಜಾರಿಕೊಳ್ಳು ವುದರಲ್ಲಿ ನಾನು ಮೊದಲಿಗನು.

"ಇದರಲ್ಲೇನೂ ಅಂತಹ ತೊಡಕು ಬರಲಾರದು. ಒಬ್ಬನನ್ನು ಮದು ವೆಯಾಗಿ ನೆಚ್ಚಿಗೆಯಿಂದ ಇರುವ ಸ್ವಭಾವ ಅವಳದಲ್ಲವೆಂದು ನನ್ನ ಊಹೆ. ಶ್ರೀಮಂತಳಾದ ಓಬಾರ್ದಿಯ ಮಗಳ ಕೈಹಿಡಿಯುವ ಶಕ್ತಿ ಯಾರಿಗಿದೆ? ಎಲ್ಲರೂ ಆಶಿಸಬಹುದು. ಅದೇ ಅಂತಸ್ತಿನ, ಅದೇ ಸ್ವಭಾವದ, ಅದೇ ಅಭಿ ರುಚಿಯ ವರನು ದೊರೆಯುವದು ದುರ್ಲಭ. ಸಮಾಜವು ಇವಳನ್ನು ಜಾರಿಣಿ ವೃತ್ತಿಯವಳೆಂದು ಪರಿಗಣಿಸಿರುವಾಗ, ಇದೇ ವೃತ್ತಿಯಿಂದಲೇ ಅವಳು ಶ್ರೀಮಂತಳಾಗಿರುವಳೆಂದು ತಿಳಿದೂ ತಿಳಿದೂ ಸಮಾಜದಲ್ಲಿದ್ದು ಬಾಳಬೇಕೆಂಬ ಯುವಕನಾವನೂ ಇವಳನ್ನು ಮದುವೆಯಾಗುವುದಿಲ್ಲ. ಪ್ರಾಮಾಣಿಕನಾವನೂ ಇವಳನ್ನು ಆಶಿಸುವುದಿಲ್ಲ. ಇವರ ಮನೆ ಅದೊಂದು ವಿಲಾಸಿನಿಯರ ಶೃಂಗಾರ ಗೃಹವಾಗಿರುವಾಗ, ಇಲ್ಲಿಯ ಅಧಿಷ್ಠಿತ ದೇವತೆ ಯಾದ ಇವಳನ್ನು ಮದುವೆಯಾಗುವ ಧೈರ್ಯ ಯಾರಿಗೆಬರುವದು?

"ವ್ಯಾಪಾರಿಗಳಿಗಂತೂ ಇಂತಹ ಸ್ತ್ರೀಯಳ ಸಖ್ಯ ಅನವಶ್ಯಕ. ಆದರೆ ಓಬಾರ್ದಿಯು ತನ್ನ ಮಗಳಿಗೆ ವರನನ್ನು ಹುಡುಕುವಾಗ ಒಳ್ಳೇ

ಶ್ರೀಮಂತನನ್ನೇ ಹುಡುಕುತ್ತಿರುವಳು. ಶ್ರೀಮಂತನು ದೊರೆಯುವ ನೆಂಬ ಆಶೆ ಆವಳಿಗಿದ್ದರೂ ನನಗೆ ಮಾತ್ರ ಆ ಭರವಸೆ ಇಲ್ಲ. ಹೀಗೆ ನಿರಾಶೆ ಹೊಂದಿ ಸಾಮಾನ್ಯ ಜನರಲ್ಲಿ ವರಾನ್ವೇಷಣೆ ನಡೆಯುಬಹುದು. ಇಲ್ಲಿಯೂ ಆವಳಿಗೆ ಯಾರೂ ದೊರೆಯುವುದಿಲ್ಲವೆಂದೇ ನನ್ನ ನಿಶ್ಚಯ. ಈ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯದೇ ಉಳಿಯುವುದು. ಇದು ಬಗೆಹರಿಯ ಲಾರದ ಒಗಟಾಗಿಯೇನಿಲ್ಲುವುದು ಅಂತೂ ಕೊನೆಗೆ ಶ್ರೀಮಂತನು ಇವ ಳನ್ನು ಸೇರಲಾರ; ಸಾಮಾನ್ಯ ವರ್ಗದವನನ್ನು ಅವಳು ಬಯುಸುವುದಿಲ್ಲ; ವ್ಯಾಪಾರಿ ವರ್ಗದವರಿಗೆ ಇವಳು ಒಗ್ಗುವುದಿಲ್ಲ. ಹೀಗಾದಲ್ಲಿ ಈ ಒಗಟು ಬಗೆಹರೆಯುವುದಾದರೂ ಹೇಗೆ?

"ಇವಳು ಈ ಶ್ರೀಮಂತಿಕೆಯ ಸೋಗಿನಲ್ಲಿರುವ ವ್ಯಭಿಚಾರಿಣಿಯೆಂದು ಕರೆಯಲ್ಪಡುತ್ತಿರುವ ಈ ಸುಂದರಿಯಾದ ಓಬಾರ್ದಿಯ ಮಗಳು. ಕುಲೀನ ವಂಶಜರು ಇವರ ಮನೆಗೆ ಬರುತ್ತಿರುವುದು ಇವಳನ್ನು ತಮ್ಮ ಹೆಂಡತಿ ಯನ್ನಾಗಿಸುವ ಅಭಿಲಾಷೆಯಿಂದಲ್ಲ. ಭೋಗಿನಿಯನ್ನಾಗಿಸಿ ತಮ್ಮ ಕಾಮ ವಾಸನೆಗೆ ಶಾಂತಿಯನ್ನೊದಗಿಸಲು ಬರುತ್ತಿರುವರು. ಆದರೆ ಈ ಯುವತಿಯ ತಾಯಿಗೆ ಇಂತಹ ಪ್ರಸಂಗಕ್ಕೆ ಅನುವು ಮಾಡಿಕೊಡುವ ಇಚ್ಛೆ ಇಲ್ಲ. ತನ್ನ ಮಗಳು ಓರ್ವ ಶ್ರೀಮಂತನ ಕೈಹಿಡಿದು ಅವನ ಹೆಂಗಸಾಗಿ (Mistress) ಸುಖದಬಾಳನ್ನು ಕಾಣಬೇಕೆಂದು ಇಚ್ಛಿಸುತ್ತಿರುವಳು. ಆದರೆ ಇಲ್ಲಿನಡೆಯುತ್ತಿ ರುವ ವ್ಯವಹಾರದ ರೀತಿಯನ್ನು ಕಂಡರೆ ಅವಳ ಪಾತಿವ್ರತ್ಯಕ್ಕೆ ಭಂಗ ಬರ ಬಹುದು. ಈ ವಾತಾವರಣದಲ್ಲಿ ಅವಳು ಸುಗಂಧಭರಿತ ಕುಸುಮವಾಗಿ ಗಿಡದಲ್ಲೇ ಉಳಿಯಲಾರಳು. ಅದನ್ನು ಈ ವನಾಂತರದಲ್ಲಿ ಚೆಲ್ಲಾಟ ವಾಡುತ್ತಿರುವ ಯಾವನಾದರೂ ನನ್ನಂತಹ ದಾರಿಹೋಕನೇ ಅನುಭವಿಸಲೇ ಬೇಕು. ಆ ಪುಣ್ಯಪ್ರಾಪ್ತಿ ನನ್ನದಾದರೆ! ಆದರೆ !! ಆಗುವುದೆ?

"ನನ್ನ ಪಾಳಿ ಎಂದು ಬರುವುದೋ ಎಂಬುದನ್ನು ಕಾತರದಿಂದ ಕಾದು ನಿಂತಿರುವೆನು. ಆವಳ ಕೈಹಿಡಿಯಲು ಅನೇಕರು ಕಾದಿರುವರು. ಫ್ರಾನ್ಸಿನ ಬೆಲ್‌ವೀನನು, ರಷ್ಯದ ಕ್ರಾಮ್ನಾಲೋ, ಇಟಲೀಯ ವಾಲ್‌ಕ್ರೀ, ಇವರೆಲ್ಲರೂ ಶ್ರೀಮಂತರೇ. ಅವರ ಜತೆಯಲ್ಲಿ ನಾನೂ ಪ್ರಯತ್ನಿಸುತ್ತಿರು ವೆನು. ಆವಳ ತಾಯಿಗೆ ನನ್ನ ಮೇಲೆ ಹೆಚ್ಚು ಮನಸ್ಸಿದ್ದಂತೆ ಕಾಣು

ತ್ತದೆ. ನಾನೊಬ್ಬ ಘನ ಶ್ರೀಮಂತನೆಂದು ಅವಳು ತಿಳಿದಿರುವಳು. ನಾನೆಂದರೆ ಅವಳಿಗೆ ಅಮಿತ ಅಭಿಮಾನ.

"ಅವಳ ಮನೆಯು ಬಂದವರನ್ನು ಬರಮಾಡಿಕೊಳ್ಳುವ ಹೋಟಲಿ ನಂತಿದೆ. ಅದೊಂದು ಭವ್ಯವಾದ ವಿಲಾಸ ಮಂದಿರ. ನವ ಸುಂದರ, ಮನಮೋಹಕ ನಾರಿಯರಿಂದ ಮಿನುಗುವ ಚಿತ್ರಶಾಲೆ. ಕಣ್ಣಿಗೆ, ಹೃದಯಕ್ಕೆ, ಶಾಂತಿಯನ್ನುಂಟು ಮಾಡುವ ನವ ತರುಣಿಯರ ಮೋಹಕ ನೋಟಗಳಲ್ಲಿ ನೀನೂ ಅಲ್ಲಿ ಮೈಮರೆಯಬಹುದು. ಪ್ಯಾರಿಸ್ ನಗರದ ಪ್ರಖ್ಯಾತ ಸ್ತ್ರೀಯರೆಲ್ಲರೂ ಅಲ್ಲಿ ನೆರೆಯುವರು. ಸೌಂದರ್ಯದಲ್ಲಿ ಒಬ್ಬರನ್ನೊಬ್ಬರು ಮೀರಿಸುವಂತಿರುವರು. ಅಲ್ಲಿಗೆ ಹೊಸದಾಗಿ ಬಂದವರಿಗೆ ಅದೊಂದು ವಿಲಾಸ ಗೃಹವೆಂದು ತಿಳಿದುಕೊಳ್ಳುವುದು ಕಷ್ಟದ ವಿಷಯವೇ ಸರಿ." ಎಂದು ತನ್ನ ಮಾತನ್ನು ಮುಗಿಸಿದ ಸರ್‌ವಿನ್ನೀಯು.

ಚಾಂಪೆಯಿಲೇ(Champs-Elysses) ಎಂಬ ವನಾಂತರವನ್ನು ಸಮೀಪಿಸಿದೆವು. ಅಲ್ಲಿಯ ಸುಖಮಯವಾದ ಹವೆ ನಮ್ಮನ್ನು ಎಚ್ಚರಿಸಿತು. ಆ ತೋಟದ ಬಳ್ಳಿಗಳ ನೆರಳಿನಲ್ಲಿ, ಗಿಡಗಳ ಬದಿಯಲ್ಲಿ ಯುವಕ ಯುವತಿಯರು ಪ್ರೇಮ ವ್ಯವಹಾರವನ್ನು ನಡೆಸುತ್ತಿರುವದನ್ನು ಗಾಳಿ ತನ್ನಯ ಸೂಕ್ಷ್ಮ ದೃಷ್ಟಿಯಿಂದ ಕಂಡು ಹಿಡಿದು ನಮಗೆ ಅವುಗಳ ವಿವರಗಳನ್ನು ಹೇಳುವಂತಿತ್ತು. ಮೆಲ್ಲಗೆ ಬರುತ್ತಿದ್ದ ಆ ಗಾಳಿಯ ಸವಿ ಬಲು ಲೇಸು.

"ಮಿತ್ರಾ, ಅವಳ ಮನೆಯಲ್ಲಿ ಅನೇಕರು ಶ್ರೀಮಂತಿಕೆಯ ಸೋಗನ್ನು ಹಾಕುವರಲ್ಲದೆ, ಶ್ರೀಮಂತ ಮನೆತನದ ಸಾಮಾಂಕಿತಗಳನ್ನು ಧರಿಸಿ ಮೆರೆಯುವರು. ಅಲ್ಲಿ ಸುಳ್ಳೆಂಬುದೇ ಪ್ರಾಮಾಣಿಕವಾಗಿ ತೋರುವುದು. ಇದು ಪ್ಯಾರಿಸ್ ನಗರದ ವ್ಯವಹಾರಕ್ಕೆ ಹೊಸತೇನಲ್ಲ. ನಿನ್ನನ್ನು ಕೌಂಟ್ ಸಾವಾಲ್‌ನೆಂದು ಅವರೆದುರು ಪರಿಚಯ ಮಾಡಿಕೊಡುವೆ. ನೆನಪಿರಲಿ." ಎಂದು ಹೇಳಿದ ಸರ್‌ವಿನ್ನಿಯು.

"ಬೇಡಪ್ಪಾ ನಾನು ಈ ಸುಳ್ಳಿನ ಕಂತೆಯಿಂದ ದೂರವೇ ಇರುತ್ತೇನೆ. ಇಲ್ಲದ ಸಿರಿತನದ ಬಿರುದನ್ನು ಹೇರಿಕೊಳ್ಳುವ ಢಂಬಾಚಾರ ಬೇಡ; ನನಗೆ ಬೇಸರ. ಒಂದೇ ದಿನದ ಸುಖಭೋಗಕ್ಕಾದರೂ ಈ ಕಳ್ಳತನ, ಸುಳ್ಳುಮಾತು ಬೇಡ."

ಸರ್ ವಿನ್ನೀಯು ನಗತೊಡಗಿದ. "ಏನು ಈ ಹುಚ್ಚು ಮಾತು? ನನ್ನನ್ನು ಅವರೆಲ್ಲರೂ ಡ್ಯೂಕನೆಂದು ಕರೆಯುವರು. ಅವರು ನನ್ನನ್ನೇಕೆ ಅಂತಹ ಶ್ರೀಮಂತಿಕೆಯ ಹೆಸರಿನಿಂದ ಕರೆಯುವರೋ ಅರಿಯೆ. ಆದರೆ ಯಾವ ಹಿರಿಯ ಆಸ್ತಿ, ಶ್ರೀಮಂತಿಕೆಯೂ ಇಲ್ಲದೆ ಅನಾಯಾಸವಾಗಿ ಅವರಿಂದ ನನಗೆ ಈ ಬಿರುದಾವಳಿಗಳು ದೊರೆಯುವಾಗ ಅದನ್ನು ಬೇಡವೆನ್ನುವುದೇಕೆಂದು ಸುಮ್ಮನಾಗಿದ್ದೇನೆ. ಈ ಬಗೆಯ ಬಿರುದಾವಳಿಗಳಿಲ್ಲದಿದ್ದರೆ ನನಗೇ ಆ ಸ್ಥಳದಲ್ಲಿ ಮಾನಮರ್ಯಾದೆ, ಏಕೆ ಪ್ರವೇಶ ಸಹಾ ದೊರೆಯುತ್ತಿರಲಿಲ್ಲ."

ಸಾವಾಲ್‌ನ ಮುಖದಲ್ಲಿ ಇನ್ನೂ ಯೋಚನೆಯ ಅನಿಶ್ಚಯ ಚಿಹ್ನೆ ಕಂಡುಬರುತ್ತಿತ್ತು.

"ಅದೇನೊಪ್ಪ.. ನಿನಗಾಗಲೇ ಶ್ರೀಮಂತಿಕೆಯ ಬಿರುದು ದೊರೆತಿದೆ. ಅದು ನಿನಗಿರಲಿ. ಆ ಮನೆಯಲ್ಲಿ ಸರ್ವಸಾಮಾನ್ಯರಂತೆ ದೂರವೇ ಇಲ್ಲವೆ ಹಿರಿಯ ಪಡಸಾಲೆಯಲ್ಲೇ ನಾನು ಉಳಿಯುವೆನು. ನನಗೇನು ಆಪ್ತವರ್ಗದಲ್ಲಿ ಪ್ರವೇಶ ಬೇಡ. ಸರ್ವಸಾಮಾನ್ಯನಾಗಿ ಉಳಿಯುವುದೇ ನನ್ನ ವೈಶಿಷ್ಟ್ಯವಾಗಿರಲಿ."

"ನನ್ನ ಮಾತು ಕೇಳು ಸಾವಾಲ್. ನೀನು ಯಾವುದಾದರೊಂದು ಬಿರುದನ್ನು ವಹಿಸಲೇಬೇಕು. ನೀನು ನಿಜವಾಗಿಯೂ ದರಿದ್ರನಿದ್ದರೂ ಅಲ್ಲಿರುವ ವರೆಗೆ ಮಾತ್ರ ಶ್ರೀಮಂತನಾಗು. ಅದರಿಂದ ನಿನಗೇನು ನಷ್ಟ? ನಿನ್ನನ್ನು ಮಿಸಿಸಿಪೀ ಪ್ರಾಂತದ ವೈಸ್‌ರಾಯನೆಂದು ಕರೆಯುವೆನು. ನಮ್ಮ ಗುಟ್ಟನ್ನು ರಟ್ಟುಮಾಡದೇ ಸುಮ್ಮನಿರಬೇಕು ತಿಳಿಯಿತೇ?"

"ಬೇಡಪ್ಪ, ಬೇಡ"

"ನಿನ್ನ ಮೂರ್ಖತನಕ್ಕೇನನ್ನಬೇಕು? ಇರಲಿ, ನಿನ್ನನ್ನು ಒಪ್ಪಿಸಲು ಇದು ಸಮಯವಲ್ಲ. ಅಲ್ಲಿ ಸೇರಿದ ಜನರೇ ನಿನಗೊಂದು ಹೆಸರನ್ನು ತಾವಾಗಿಯೇ ದಯಪಾಲಿಸಿದಾಗ,ನೀನು ಸುಮ್ಮನೇ ಸ್ವೀಕರಿಸುವೆ.ಈಗೇಕೆ ಒಣ ಹರಟೆ?" ಎಂದು ಮಾತನಾಡುತ್ತ ಅವರು ಮುಂದೆ ಸಾಗಿದರು. ರೂಡಿಬೇರಿಯಲ್ಲಿ ಕೊಂಚ ದೂರ ನಡೆದು ಬಲಕ್ಕೆ ತಿರುಗಿ, ಹೊಸದಾಗಿ ನಿರ್ಮಿತವಾದ ಒಂದು ದಿವ್ಯವಾದ ಭವ್ಯ ಮಂದಿರವನ್ನು ಪ್ರವೇಶ

ಮಾಡಿದರು. ಬಾಗಿಲಲ್ಲಿ ಕಾದು ನಿಂತ ಆಳುಗಳಿಗೆ ತಮ್ಮ ಕೈಚೀಲ, ಹ್ಯಾಟ್, ಓವರ್ ಕೋಟುಗಳನ್ನಿತ್ತು, ಭವನವನ್ನು ಪ್ರವೇಶ ಮಾಡುವ ಮುನ್ನ ಅಲ್ಲಿ ನೆರೆದಿದ್ದ ಸುವಿಶಾಲಾಕ್ಷಿಯರ ಸುಂದರ ಸುಮಧುರ ವಾಸನೆ, ಅವರು ಧರಿಸಿದ ನೂತನ ಅರಿವೆಗಳ ಸರ ಸರ ಸಪ್ಪಳದವು ಈ ಈರ್ವರನ್ನು ಸುಖ ಸ್ವಪ್ನದಲ್ಲಿ ಕೆಡವಿದವು ಪಕ್ಕದ ಕೋಣೆಯಲ್ಲಿ ನೆರೆದು ಸಂತೋಷದಲ್ಲಿ ತಲ್ಲೀನರಾಗಿ ಹಾಸ್ಯ ಲಹರಿಯಲ್ಲಿ ಮಗ್ನರಾದ ಜನರ ಗುಜು ಗುಜು ಸದ್ದು ಕೇಳಿಸುತ್ತಿತ್ತು.

ಅಲ್ಲಿಯ ಮುಖ್ಯನಾದವನು ಇವರಿಗೆ ಸುಖಾಗಮನ ಬಯಸಿ ಮಂದ ಹಾಸದಿಂದ ಬರಮಾಡಿಕೊಂಡ. ವಯಸ್ಸಾದ ಅವನ ಮುಖದ ಮೇಲಿನ ಬಿಳಿ ಮೀಸೆಗಳು, ಎತ್ತರವಾದ ಮೈಕಟ್ಟು, ಮುಖದಲ್ಲಿ ಕಂಡು ಬರುತಿದ್ದ ಠೀವಿ, ಅವನ ಅನುಭವವನ್ನು ಸಾರುತ್ತಿತ್ತು. ಹೆಚ್ಚು ಬಗೆಯ ವಿನಯದಿಂದ "ತಾವು ಯಾರೆಂದು ಇಲ್ಲಿಯ ಜನರಿಗೆ ಪರಿಚಯಮಾಡಿಕೊಡಲಿ" ಎಂದು ಕೇಳಿದ.

"ಸಾವಾಲ್ ಮಹಾಶಯರಿವರು"

"ಸರಿ ಹಾಗಾದರೆ" ಎಂದು, ಅವನು ಆಟ ಪಾಟಗಳಲ್ಲಿ ಮಗ್ನರಾದ ಆ ವಿಲಾಸಿಗಳು ನೆರೆದಿದ್ದ ಮಂದಿರದ ಬಾಗಿಲನ್ನು ತೆರೆಯುತ್ತ "ಶ್ರೀಮಂತ ಸರವೀನ್ನೀ ಡ್ಯೂಕರೂ ಬರುತಿದ್ದಾರೆ" ಎಂದು ಹೇಳಿದ ಮಾತಿಗೆ ಸರಿಯಾಗಿ ಸರ್‌ವಿನ್ನೀಯು, "ಇವರು ನನ್ನ ಮಿತ್ರರು ಬಾರನ್ ಸಾವಾಲ್ ಮಹಾಶಯರು" ಎಂದು ಆಲ್ಲಿಯ ಮಿತ್ರರಿಗೆ ಪರಿಚಯ ಮಾಡಿಕೊಟ್ಟ.

ಮುಂದಿನ ದೊಡ್ಡ ಕೋಣೆಯಲ್ಲಿ ಸುಂದರ ಸ್ತ್ರೀಯರಿದ್ದರು. ಹೊಸ ಉಡುಪುಗಳ ರಭಸದಲ್ಲಿ ನೂತನ ಕಳೆಯನ್ನು ಪಡೆದ ಆ ಮೋಹನಾಂಗಿಯರೆಲ್ಲರೂ ತಮ್ಮ ಭುಜಗಳ ವರೆಗೂ ತೋಳಿಲ್ಲದ(ಕುಪ್ಪುಸ)ಜಾಕೆಟ್ ಧರಿಸಿದ ಆಕರ್ಷಕ ನೋಟವನ್ನು ನೋಡಿ ಸಾವಾಲ್‌ನಿಗೆ ಬಹು ಆನಂದವಾಯಿತು.

ಮನೆಯ ಯಜಮಾನಿಯು ಇವರೀರ್ವರನ್ನು ಕಂಡು ಮಂದಹಾಸದಿಂದ ತೀರ ಹತ್ತಿರ ಬಂದು ಸುಸ್ವಾಗತ ಬಯಸಿದಳು. ಅವಳ ನಡಿಗೆಯಲ್ಲಿ ದೊಡ್ಡಸ್ತಿಕೆಯ ಗಂಭೀರತೆ ಇತ್ತು ಆದರೂ ಸಮಯಕ್ಕೆತಕ್ಕ ವಿನಯದಿಂದ

ಅವಳು. ಅವರೀರ್ವರನ್ನೂ ಬರಮಾಡಿಕೊಂಡಳು. ಅವಳ ಹಣೆ ವಿಶಾಲವಾಗಿ ರಲಿಲ್ಲ. ತಲೆಯ ಕಪ್ಪುಕೂದಲು ಕಿವಿಯ ಕೊನೆಯ ವರೆಗೂ ಹರಡಿ ಕೊಂಡಿದ್ದವು. ಸಾಕಷ್ಟು ಎತ್ತರ, ಕೊಂಚ ದಪ್ಪವಾದ ದೇಹಾಕೃತಿ, ವಯಸ್ಸಾದ ಅವಳ ಮುಖಲಕ್ಷಣವಾದರೂ ಅವಳು ಹೊಸಬರನ್ನು ಬಲು ಬೇಗ ಮೋಹಗೊಳಿಸುವಂತಹ ಸುಂದರಿಯೆಂದು ಹೇಳಬಹುದು. ಅವಳ ತಿದ್ದಿ ತೀಡಿದ ಕಪ್ಪು ನಯನಗಳು ಬಹು ಆಕರ್ಷಕವಾಗಿದ್ದುವು. ಕಿರಿಯ ಬಾಯಿಯ ಮೇಲೆ ನಿರ್ಮಿತವಾದ ಸಣ್ಣಪ್ರಮಾಣದ ಮೂಗು ಅವಳ ಕಾಮುಕ ಸ್ವಭಾವವನ್ನು ಸೂಚಿಸುತ್ತಿದ್ದಿತಲ್ಲದೆ, ಯಾರನ್ನೂ ಸೋಲಿಸುವ ಶಕ್ತಿ ಸಾಮರ್ಥ್ಯವನ್ನು ಸೂಚಿಸುತಿತ್ತು.

ಅವಳಲ್ಲಿ ನೋಡುವವರಿಗೆ ಹೆಚ್ಚು ಆಕರ್ಷಕವಾದ ವಿಷಯವೆಂದರೆ ಅವಳ ಮಧುರ ನುಡಿಯ ಸರಣಿ; ಅವಳ ಮಾತಿನ ಸವಿ ಬಲು ಮನ ಮೋಹಕವಾಗಿತ್ತು. ಅವಳ ಮಾತಿನ ಬಲೆಗೆ ಬೀಳದವರೇ ವಿರಳವೆನ್ನ ಬಹುದು. ಆ ಮಾಟದ ಮುಖದಿಂದ ಹೊರಬರುವ ಅವಳ ಇಂಪಾದ ನುಡಿ ಗಳು ಸೊಗಸಾದ ಬುಗ್ಗೆಯ ನೀರಿನಂತೆ ಸ್ವಚ್ಛ, ತಿಳಿ, ಮೃದು ಮಧುರ ವಾಗಿದ್ದವು. ಕೇಳುತ್ತ ಕುಳಿತರೆ ಯಾರಾದರೂ ಪರವಶರಾಗುವುದು ಖಂಡಿತವೇ ಸರಿ. ಅವಳ ಮುಖದಿಂದ ಮಾತುಗಳು ಕಲ್ಲಿನ ಮೇಲೆ ಹರಿಯುವ ತಿಳಿ ನೀರಿನ ಸಪ್ಪಳದಂತೆ ಮನೋಹರವಾಗಿದ್ದುವಲ್ಲದೆ, ಆ ಮಾತುಗಳ ಮಾಧುರ್ಯ ಕೇಳುವವರಲ್ಲಿ ಹೊಸ ಚೈತನ್ಯವನ್ನುಂಟುಮಾಡುತ್ತಿದ್ದವು.

ಇವರೀರ್ವರನ್ನು ಸಮೀಪಿಸಿದ ಆ ಯಜಮಾನಿ ಸರ್ ವೀನ್ನಿಗೊಂದು ಕೈ, ಮತ್ತು ಸಾವಾಲ್‌ನಿಗೆ ಒಂದು ಕೈಯನ್ನಿತ್ತು ಮುಂದೆ ಸಾಗಿದಳು. ಮರ್ಯಾದೆಯ ಲಕ್ಷಣವೆಂದು ಆ ಮಂದಿರದ ಆ ಕೊನೆಯವರೆಗೆ ಹೋದ ನಂತರ ಇಬ್ಬರೂ ಆ ಸುಂದರಿಯ ಕೈಗಳನ್ನು ಮುದ್ದಿಡಲು ಅವಳು ಹೊಸದಾಗಿ ಬಂದಿದ್ದ ಸಾವಾಲ್‌ನನ್ನು ಕುರಿತು "ಡ್ಯೂಕರ ಮಿತ್ರರಾದ ಬ್ಯಾರನ್‌ರೇ, ತಮಗಿಲ್ಲಿ ಯಾವಾಗಲೂ ಸ್ವಾಗತವಿದೆ. ಇದು ತಮ್ಮ ಮನೆಯೆಂದೇ ಭಾವಿಸಬೇಕೆಂದು ನನ್ನ ಕೋರಿಕೆ'' ಎಂದು ಎಲ್ಲರಿಗೂ ಕೇಳಿಸುವಂತೆ ನುಡಿದಳು.

ಅನಂತರ ಅಲ್ಲಿ ನೆರೆದಿದ್ದ ಓರ್ವ ಶ್ರೀಮಂತನನ್ನುದ್ದೇಶಿಸಿ "ಕಲೋಸಸ್

ಮಹಾಶಯರೇ,ಈ ಇಬ್ಬರ ಪರಿಚಯ ಮಾಡಿಕೊಳ್ಳಿ'' ಎಂದಳು. ಪರಿಮಳ ದ್ರವ್ಯಗಳ ಸುವಾಸನೆ ಸುತ್ತಲಿದ್ದ ರಸಿಕರನ್ನು ಆಕರ್ಷಿಸಿತ್ತು. ಇತರ ಶ್ರೀಮಂತರು ಆ ಭವ್ಯ ಭವನದಲ್ಲಿ ಬರತೊಡಗಿದ್ದರು. ಅಲ್ಲಿ ಆಗಲಿರುವ ನೃತ್ಯ,ಆಟವಾಟಗಳಲ್ಲಿ ಭಾಗವಹಿಸಲು ಉತ್ಸುಕರಾದ ಆ ಶ್ರೀಮಂತರು ಅಲ್ಲಿ ನೆರೆದಿದ್ದ ಯುವತಿಯರ ಸಂಗಡ ಸರಸ ಮಾತುಗಳಲ್ಲಿ ತೊಡಗಿದ್ದರು. ಆ ಮನೆಯಾಕೆ ಆಗಂತುಕರನ್ನುದ್ದೇಶಿಸಿ " ಮಿತ್ರರೇ, ನನ್ನ ಮಗಳು ಅಲ್ಲಿ, ಆ ಭಾಗದಲ್ಲಿ ಹರಟೆ ಕೊಚ್ಚುತ್ತಿರುವಳು ತಾವು ಅಲ್ಲಿಗೆ ಹೋಗಿ ಅವಳೊಂದಿಗೆ ಪರಿಚಯ ಬೆಳೆಯಿಸಿಕೊಳ್ಳಬಹುದು. ಇದು ತಮ್ಮ ಮನೆಯೆಂದು ಭಾವಿಸಿ ವರ್ತಿಸಬೇಕಾಗಿ ವಿನಂತಿ '' ಎಂದು ಹೇಳಿ ಮುಂದೆ ಸಾಗಿದಳು. ಅವಳು ಮುಂದೆ ಸಾಗುವಾಗ ಸಾವಾಲ್‌ನನ್ನುದ್ದೇಶಿಸಿ ಮುಗುಳು ನಗೆ ಬೀರಿದಳು. ಆ ಮುಗುಳು ನಗೆಯಲ್ಲಿ ಅವಳಿಗಾವ ಸಂತೋಷದ ಕುರುಹು ಕಾಣುತ್ತಿತ್ತು.

" ಸಾವಾಲ್,ನಿನಗೆ ಈ ಮಂದಿರದ ಪರಿಚಯ ಮಾಡಿಕೊಡುತ್ತೇನೆ. ಅಲ್ಲಿ ಆ ಮೂಲೆಯಲ್ಲಿ ರೊಕ್ಕವಿಟ್ಟು ಕೆಲವು ಆಟಗಳನ್ನಾಡುತ್ತಿರುವರು. ಇತ್ತ ನಲಿಯುತ್ತಿರುವ ಚೆಲುವೆಯರೆಲ್ಲರೂ ನಿನಗೆ ಬೇಕಾದರೆ ನಿನ್ನ ಅಂತಸ್ತಿಗೆ ತಕ್ಕಂತೆ ಅವರನ್ನು ಆರಿಸಿಕೊಳ್ಳಬಹುದು; ಇವರು ಈ ಬಗೆಯ ವ್ಯವಹಾರದಲ್ಲಿ ನುರಿತವರು.ಇಲ್ಲಿ ಈ ವಿಭಾಗದಲ್ಲಿ ಯಾವುದನ್ನೂ ಅರಿಯದ ಮುಗ್ಧೆಯರು ನಲಿಯುತ್ತಿರುವುದನ್ನು ನೀನು ಕಾಣಬಹುದು ಕಾಮುಕವ್ಯವಹಾರ ಅವರಿಗೆ ಹೊಸದು. ಹೊಸ ಶೋಭೆಯಿಂದ ಅವರು ನಲಿಯುತ್ತಿರುವರು.ಮದುವೆಯಾಗಲು ಅವರಲ್ಲಿ ಕೆಲವರು ಸಿದ್ಧರಿರುವರು. ಮುಂದೆ ತಮ್ಮ ಸೊಬಗು ಬಿನ್ನಾಣಗಳಿಂದ,ರೂಪಲಾವಣ್ಯಗಳಿಂದ ವಿಲಾಸಿಗಳ ಕಾಮದಾಹಕ್ಕೆ ಬಲಿಯಾಗಲು ಸಿದ್ಧರಿರುವ ಇವರ ಮುಂದಿನ ಜೀವನ ಯಾವಹಾದಿ ಹಿಡಿಯುತ್ತದೆಂಬುವುದನ್ನು,ಅವರಜನ್ಮರಹಸ್ಯವನ್ನು ಯಾರೂ ಅರಿಯುವ ಗೋಜಿಗೆ ಹೋಗುವುದಿಲ್ಲ. ಸಕಾಲಕ್ಕೆ, ಸಮಯೋಚಿತವಾಗಿ ಯಾಚಿಸಿದ ಸುಖವನ್ನು ಕೊಡಲು ಸರ್ವಸಿದ್ಧರಾದ ಇವರು ಎಲ್ಲರ ಆದರ ಆಕರ್ಷಣೆಗಳಿಗೆ ಪಾತ್ರರೇ ಸರಿ'' ಎಂದು ಸರ್‌ವೀನ್ನೀಯು ನುಡಿದು ಮಿತ್ರನೊಂದಿಗೆ ಮುಂದರಿದ. ಸಾವಾಲ್‌ನ ಬಾಯಿ ನೀರೂರುತ್ತಿತ್ತು. ನವಯುವತಿ

ಯರ ನಗುಮುಖಗಳನ್ನು ಕಂಡು ಸಸುನಗುವನ್ನು ಬೀರುತ್ತ ಮುಂದರಿಯುತ್ತಲಿದ್ದ ಸರ್ ವೀನ್ನೀಯ ನಡತೆಯನ್ನು ಕಂಡು ಮೂಕನಾಗಿ ಸಾವಾಲ್‌ನು ಅವನನ್ನು ಹಿಂಬಾಲಿಸುತ್ತಲಿದ್ದ.

ಈ ಹಾಲಿನ ಪಕ್ಕದಲ್ಲೇ ನಿರ್ಮಿತವಾದ ಮತ್ತೊಂದು ಅಲಂಕೃತವಾದ ದೊಡ್ಡ ಹಾಲಿನಲ್ಲಿ ಸಂಗೀತ ಜಲಸಾ ನಡೆದಿತ್ತು. ಅವರು ಒಂದು ನರ್ತನದ ಹಾಡನ್ನು ನುಡಿಸುತ್ತಿದ್ದರು. ಬಾಗಿಲಲ್ಲಿ ಇಬ್ಬರೂ ನಿಂತು ಸಂಗೀತಗೋಷ್ಠಿಯನ್ನು ಕಂಡು ತಮ್ಮ ಸಂತೋಷವನ್ನು ಸೂಚಿಸಿ ನೋಡತೊಡಗಿದರು. ಅಲ್ಲಿ ನೆರೆದ ರಸಿಕರೆಲ್ಲರೂ ನೃತ್ಯವನ್ನು ಆರಂಭಿಸುವ ಉತ್ಸುಕತೆಯಲ್ಲಿ ಹೆಂಗಳೆಯರನ್ನು ತಮ್ಮ ಪಾಲುಗಾರರನ್ನಾಗಿ ಆರಿಸುವ ಯೋಚನೆಯಲ್ಲಿದ್ದಂತೆ ಆ ಜನ ಸಮೂಹ ಕಂಡುಬಂತು.

ಆ ಹಾಲಿನ ಮತ್ತೊಂದು ಭಾಗದಿಂದ ಓರ್ವ ಎತ್ತರವಾದ ನವತರುಣಿ,ರಭಸದಿಂದ ದಾರಿಯಲ್ಲಿ ಅಡ್ಡ ಬಂದ ರಸಿಕರನ್ನು ಎರಡೂ ಕೈಗಳಿಂದ ತಳ್ಳುತ್ತ ಧಾವಿಸಿ ಬರುತ್ತಿರುವುದು ಕಂಡುಬಂತು. ನೀಳವಾದ ಚುಂಗನ್ನು ಕೈಯಲ್ಲಿ ಎತ್ತಿ ಹಿಡಿದಿದ್ದಳು. ಅವಳ ನಡಗೆಯಲ್ಲಿ ಅತಿ ಚುರುಕುತನವಿತ್ತು. ದೂರದಿಂದಲೇ "ಮಸ್ಕೀಡ್ (ಸರವೀಸ್ನೀಗೆ ಅವಳು ನಾಮಕರಣ ಮಾಡಿದ ಹೆಸರು) ಮಹಾಶಯರೇ? ಹೇಗಿರುವಿರಿ? ಯಾವಾಗ ಬಂದದ್ದು?" ಎಂದು ಕೇಳುತ್ತ ಹತ್ತಿರ ಬಂದಳು.

ಅವಳು ತುಂಬು ಚೆಲುವಿ; ಯೌವ್ವನ ಉಕ್ಕಿ ಚಿಮ್ಮುತ್ತಿತ್ತು; ಮೈ ಕೊಬ್ಬಿರಲಿಲ್ಲ. ಚೊಕ್ಕಟವಾದ ಆಕೃತಿಗೆ ಚೆಲುವಾದ ಮೈಕಟ್ಟು. ಕಾಂತಿಯಿಂದ ಮಿನುಗುವ ಅವಳ ದೇಹದ ಸೊಬಗು ಆ ಕೆಂಪು ಕೂದಲಿನಲ್ಲಿ ಇನ್ನೂ ಹೆಚ್ಚಾಗಿ ಎದ್ದು ಕಾಣುತ್ತಿತ್ತು. ಅವಳದು ಮಾಟವಾದ ಕುತ್ತಿಗೆ; ಮುದ್ದಾದ ಸುಂದರ ಮುಖ; ಅದರ ಸುತ್ತಲೂ ಸಮನಾಗಿ ಆವರಿಸಿದ ತಲೆಗೂದಲು; ಇವೆಲ್ಲವುಗಳಿಂದ ಅವಳು ದೇವಲೋಕದ ಅಪ್ಸರೆಯಂತೆ ಕಾಣುತಿದ್ದಳು. ಸೃಷ್ಟಿಯಲ್ಲಿ ಇವಳೊಂದು ಅದ್ವಿತೀಯವಾದ ಚೆಲುವಿ.

ಅವಳ ನಡೆಯು ಬಹು ನೈಜವಾಗಿತ್ತಲ್ಲದೆ, ಸರಿಯಾದ ಗಂಭೀರತೆಯನ್ನೂ ಪಡೆದಿತ್ತು. ವಿನಯದಿಂದ ಕೂಡಿದ ಅವಳ ವರ್ತನೆ ಬಹು ಆಕರ್ಷಕವಾಗಿತ್ತು. ಅವಳು ನಿಜವಾಗಿಯೂ ಕಾಮುಕ ವ್ಯವಹಾರವನ್ನರಿಯದ

ಮುಗ್ಧಳಂತೆ ಕಾಣುತ್ತಿದ್ದಳು. ಅವಳನ್ನು ನೋಡುವುದರಿಂದ ಎಲ್ಲಿಯೂ ಇಲ್ಲದ ಆನಂದ, ದಿವ್ಯಾನುಭವ ತಾನಾಗಿಯೇ ಆಗುತ್ತಿದ್ದುದು ಸೋಜಿಗವಲ್ಲ. ಅವಳ ಪ್ರತಿಯೊಂದು ಹಾವಭಾವದಲ್ಲಿಯೂ ನೂತನತೆ ಕಂಡು ಬರುತ್ತಿತ್ತು.

"ಹೇಗಿರುವಿರಿ ಮಸ್ಕೇಡರೇ?" ಎಂದು ಅವಳು ಕೇಳಿದ ಪ್ರಶ್ನೆಗೆ ಮಾರುತ್ತರವಾಗಿ ಸರ್‌ವೀನ್ನಿಯು ಅವಳ ಕೈಯನ್ನು ಕುಲುಕಿ, "ಇವೆತ್, ಇವರು ನನ್ನ ಮಿತ್ರರಾದ ಬಾರನ್ ಸಾವಾಲ್ ಮಹಾಶಯರು" ಎಂದು ತನ್ನ ಮಿತ್ರನ ಪರಿಚಯ ಮಾಡಿ ಕೊಟ್ಟನು.

"ನಿಮಗೆ ಇಲ್ಲಿ ಹೃತ್ಪೂರ್ವಕ ಸ್ವಾಗತವಿದೆ ಸಾವಾಲ್‌ರೇ, ನೀವು ಯಾವಾಗಲೂ ಇಷ್ಟೇ ಎತ್ತರವಾಗಿ ಕಾಣುವಿರೇನು?'' ಎಂದು ವಿನೋದದ ಪ್ರಶ್ನೆ ಹಾಕಿದಳು.

ಅವಳ ಕುಚೇಷ್ಟೆಯ ಪ್ರಶ್ನೆಗೆ ಸರಿಯಾದ ಮಾರುತ್ತರವನ್ನೀಯುವ ಚತುರನಾದ ಸರ್‌ವೀನ್ನಿಯು "ಇಲ್ಲ, ಇಲ್ಲ, ನಿಮ್ಮ ತಾಯಿಯವರಿಗೆ ಎತ್ತರವಾದವರನ್ನು ಕಂಡರೆ ಬಹು ಪ್ರೀತಿ; ಆದುದರಿಂದಲೇ ಈ ನನ್ನ ಮಿತ್ರರು ನಿಮ್ಮ ತಾಯಿಯ ಮನವೊಲಿಸಲು ಎತ್ತರವಾಗಿ ಬೆಳೆಯುವಂತೆ ಅನುವು ಮಾಡಿಕೊಂಡಿರುವರು.'' ಎಂದು ಹೇಳಿ ನಸುನಕ್ಕ.

ಈ ಹಾಸ್ಯದ ಮಾರುತ್ತರವನ್ನು ಸರಿಯಾಗಿ ಅರ್ಥಮಾಡಿಕೊಂಡ ಆ ಚದುರಿ ವಿಸ್ಮಯವನ್ನು ತೋರಗೊಡದೆ ಅದೇ ತಿಳಿಹಾಸ್ಯದ ಸರಣಿಯಲ್ಲಿ "ಹಾಗೇನು? ಬಹುಚೆನ್ನು. ಆದರೆ ನೀವು ನನ್ನೊಂದಿಗೆ ಸಲುಗೆಯಿಂದ ವರ್ತಿಸಬೇಕಾದರೆ ತಾವು ಕೊಂಚ ಗಿಡ್ಡರಾಗಬೇಕು. ನನಗೆ ತೀರ ಎತ್ತರದವರೊಂದಿಗೆ ಕುಣಿಯುವದೆಂದರೆ ಬೇಸರ. ಈ ನಮ್ಮ ಮಸ್ಕೇಡರು ನನಗೆ ತಕ್ಕಪಕ್ಕೆಂದೇ ನನ್ನ ಭಾವನೆ'' ಎಂದು ಹೇಳಿ ಬಾರನ್ ಸಾವಾಲ್‌ನತ್ತ ತನ್ನ ಹೊಳೆಯುವ ಕೈನೀಡಿದಳು. ಅವನದನ್ನು ಮುದ್ದಿಸಿದ. "ನೀವೂ ನೃತ್ಯದಲ್ಲಿ ಭಾಗವಹಿಸುವಿರಲ್ಲವೆ ಮಸ್ಕೇಡರೇ?" ಎಂಬ ಕರೆ ಬರುವ ಹೊತ್ತಿಗೆ ಸರ್‌ವೀನ್ನೀಯು ಒಂದು ಕೈ ಇವೆತ್ತಳ ಅಂದವಾದ ಟೊಂಕಕ್ಕೆ ಸುತ್ತಿಕೊಂಡಿತ್ತು. ಸಂಗೀತದ ಮೇಳಕ್ಕೆ ಸರಿಯಾಗಿ ಕುಣಿಯುವುದು ಆರಂಭವಾಯಿತು. ಸರ್‌ವೀನ್ನೀಯು ಎಲ್ಲಿಯೂ ಇಲ್ಲದ

ಆವೇಶದಿಂದಲೂ ನಿಪುಣತೆಯಿಂದಲೂ ಕುಣಿಯತೊಡಗಿದ.

ಇವರಿಬ್ಬರ ಕುಣಿತ ಮಿಕ್ಕೆಲ್ಲರಿಗಿಂತಲೂ ಚೆನ್ನಾಗಿತ್ತು. ನರ್ತಿಸುವಾಗ ಅವರಿಬ್ಬರೂ ಒಬ್ಬರೇ ಯೆಂಬಂತೆ ಕಾಣುತ್ತಿತ್ತು; ತನ್ಮಯತೆಯನ್ನು ಪಡೆದಿತ್ತು. ಇಂದವರ ನರ್ತನ ಎಲ್ಲರನ್ನೂ ನಾಚಿಸುವಂತಿತ್ತು. ಅವರ ಕೈಕಾಲುಗಳ ಮಿಣಿತ, ಎದೆಗಳ ಹೊಯ್ದಾಟ, ತನ್ಮಯರಾಗಿ ನರ್ತಿಸುವ ಭಂಗಿ, ಅವರ ನೃತ್ಯಕಲೆಯ ಅರಿವನ್ನು, ಪರಿಪಕ್ವತೆಯನ್ನು ಸೂಚಿಸುತ್ತಿತ್ತು. ಸರಿಯಾದ ರೀತಿಯಲ್ಲಿ ಅವರು ನರ್ತಿಸುತ್ತಿದ್ದುದರಿಂದ ಅವರಿಬ್ಬರು ಇತರರಂತೆ ದಣಿಯಲಿಲ್ಲ. ಅನೇಕರು ನಡುನಡುವೆ ಕೊಂಚ ನಿಂತರೂ, ಇವರಿಬ್ಬರೂ ಒಂದೇ ಸವನೆ ಕೊಂಚವೂ ನಿಲ್ಲದೆ ನರ್ತಿಸುತ್ತಿರ್ದ್ದುದು ಎಲ್ಲರನ್ನೂ ಬೆರಗುಗೊಳಿಸಿತು. ಕುಣಿಯುತ್ತ, ಮಣಿಯುತ್ತ ಆ ಭವ್ಯಮಂದಿರದ ಮೂಲೆ ಮೂಲೆಗೂ ಜಿಗಿಯುತ್ತಿದ್ದರು. ಇವರ ಅದ್ಭುತ ನರ್ತನದಿಂದ ಸಂಗೀತ ಮೇಳದವರು ಸ್ಫೂರ್ತಿಗೊಂಡು, ಅವರು ವಾದ್ಯಗಳನ್ನು ಉತ್ಸುಕತೆಯಿಂದ ಬಾರಿಸತೊಡಗಿದರು. ಕೊನೆಯಲ್ಲಿ ಅವರು ನರ್ತನ ನಿಲ್ಲಿಸಿದಾಗ ರಂಗ ಮಂದಿರದಲ್ಲಿ ದೂರಸರಿದು ನಿಂತವರೆಲ್ಲರೂ ಈ ಜತೆಗಾರರ ಪ್ರದರ್ಶನವನ್ನು ಹೊಗಳಿಕೆಯ ಚಿಹ್ನೆಯೆಂದು ಚಪ್ಪಾಳೆಗಳಿಂದ ಪ್ರೋತ್ಸಾಹಿಸಿದರು.

ಹೆಚ್ಚು ಸಮಯ ನರ್ತಿಸಿದುದರಿಂದ ಇವರಿಬ್ಬರೂ ಬಹಳ ದಣಿದಂತೆ ಕಂಡುಬಂದರು. ಇವೆತ್‌ಳ ಮೈಬೆವರಿತ್ತು. ಆವಳ ಮುಖ ಕೆಂಪಾಗಿತ್ತು. ಕಣ್ಣುಗಳು ಹೆಚ್ಚಿನ ಶೋಭೆಯಿಂದ ಮಿನುಗತೊಡಗಿದವು. ಬಹು ದೂರ ಜಿಗಿದು ಹೆಮ್ಮೆಯಿಂದ ತಾನು ಗೆದ್ದೆನಲ್ಲವೆಂಬ ಗೆಲುವನ್ನು ಬೀರುತ್ತ ಹರಿಣದ ಕಣ್ಣುಗಳಂತೆ ಅವಳ ಕಣ್ಣುಗಳಲ್ಲೊಂದು ಬಗೆಯ ಹೊಸ ಕಾಂತಿ ಉದಯಿಸಿತ್ತು.

ಸರ್‌ವೀನ್ನೀಯು ಬಹಳ ದಣಿದುದರಿಂದಲೂ ಇಂತಹ ವೇಗವಾದ ನರ್ತನ ಅವನಿಗೆ ಹೊಸತಾದುದರಿಂದಲೂ ಅವನು ತೀರ ಬಳಲಿದವನಾಗಿದ್ದನಲ್ಲದೆ, ಎಚ್ಚರತಪ್ಪಿ ಕೆಳಗೆ ಬೀಳುವುದರಲ್ಲಿದ್ದನು. ಆದರೆ ಪಕ್ಕದಲ್ಲಿದ್ದ ಬಾಗಿಲನ್ನೇ ಆಸರವನ್ನಾಗಿ ಮಾಡಿಕೊಂಡು ನಿಂತ ಇವನನ್ನು ಇವೆತ್‌ಳು ಕಂಡು "ಇದೇನು ಇಷ್ಟು ಬೇಗ ದಣಿದಿರಿ? ನನಗಿಂತಲೂ ನೀವೇ ನಿರ್ಬಲ

ರೆಂದ ಹಾಗಾಯಿತು. ನೋಡಿ ಇಲ್ಲಿ; ಬೇಕಾದರೆ ಮತ್ತೊಂದು ನರ್ತನಕ್ಕೆ ನನ್ನ ಶರೀರದಲ್ಲಿಯ ಶಕ್ತಿಯು ಹಾತೊರೆಯುತ್ತಿದೆ'' ಎಂದು ಹಂಗಿಸುವ ದನಿಯಲ್ಲಿ ನುಡಿದಳು.

ಇವಳ ಈ ಕೊಂಕುನುಡಿಗೆ ಅವನೊಂದು ನಗೆಯನ್ನು ಬೀರಿ ಅವಳ ಹಂಗಿನಮಾತಿನ ಬಲೆಗೆ ಸೆರೆಯಾಳಾಗಿ ಸುಮ್ಮನೆ ನಿಂತುಬಿಟ್ಟ. ಅವನ ಮುಖದ ಮೇಲಿನ ದಣಿವು, ದೇಹಾಲಸ್ಯದಿಂದ ಅರೆ ಮುಚ್ಚುತ್ತಲಿದ್ದ ಅವನ ಕಣ್ಣುಗಳು ಅವನ ನಿಜಸ್ಥಿತಿಯನ್ನು ಹೇಳುತ್ತಿದ್ದವು. ಅವನ ಆಗಿನ ಮೌನ, ಮತ್ತು ಆಗ ನಿಂತ ಭಂಗಿಯಿಂದ ಅವನು ತೀರ ಸೋತು ಹೋಗಿರುವನೆಂದು ತಿಳಿದವಳಾಗಿ ಅವನನ್ನು ಸಂತೈಸುತ್ತ, ಇವೆತ್‌ಳು "ನಿಮ್ಮ ಕುಣಿತ ಕೆಲವೊಂದು ಸಮಯಗಳಲ್ಲಿ ನನ್ನನ್ನು ಬೆರಗುಗೊಳಿಸಿತು. ನಿಮ್ಮ ಕಾಲಿನ ಹೊಯ್ದಾಟ ಬಹು ಚಮತ್ಕಾರವಾಗಿತ್ತು. ಹಸಿದ ಹುಲಿಯಂತೆ ಮುಂದೇನೆಂಬುದರ ಅರಿವಿಲ್ಲದೆ, ನಿಮ್ಮ ಶರೀರ ಶಕ್ತಿಯನ್ನು ಮೀರಿ ಕುಣಿದಿರಿ. ನೀವು ಹೀಗೆ ಮೈಮರೆಯಬಾರದು. ಇಂತಹ ಕುಣಿತದಿಂದ ನಿಮಗೆ ಕಷ್ಟ ಉಂಟಾಗುವುದು. ಖಂಡಿತ: ಅದರ ಜತೆಗೆ ನಾಲ್ಕು ಮಂದಿಯಲ್ಲಿ ಅವಮಾನವೂ ಬಂದೊದಗಬಹುದು. ಕಾರಣ ಇನ್ನುಮುಂದೆ ಕೊಂಚಜಾಗ್ರತರಾಗಿರಬೇಕು. ನಿಮ್ಮ ಮಿತ್ರರೆಲ್ಲಿರುವರೋ ಕಂಡು ಹಿಡಿಯುವ ಬನ್ನಿ" ಎಂದು ಅವಸರದಿಂದ ನುಡಿದು ಅವನ ಕೈಹಿಡಿದು ಮುಂದೆ ಸಾಗಿದಳು.

ಮೌನದಿಂದ ಅವಳನ್ನು ಸರ್ ವೀನ್ನಿಯು ಹಿಂಬಾಲಿಸಿದ. ನಿಜವಾಗಿಯೂ ಅವನು ದಣಿದಿದ್ದ.

ಸಾವಾಲ್‌ನ ಜತೆಯಲ್ಲಿ ಮದಾಮ್ ಓಬರ್ದಿ ಇದ್ದಳು. ಸರ್ವಸಾಮಾನ್ಯ ವಿಷಯಗಳ ಬಗ್ಗೆ ಅವನೊಂದಿಗೆ ಮಾತನಾಡುವಾಗ ಅವಳ ಮಾತಿನಲ್ಲಿಯ ಮಾರ್ಮಿಕತೆಗೆ ಮತ್ತು ಅದರ ಸವಿಗೆ ಮನಸೋತು ಹೋಗಿದ್ದ ಸಾವಾಲ್. ಅವಳನ್ನು ಸೂಕ್ಷ್ಮದೃಷ್ಟಿಯಿಂದ ನೋಡುತ್ತಲಿರುವಾಗ ಅವಳ ಮುದ್ದಾದ ಬಾಯಿಂದ ಹೊರಬರುವ ಸವಿನುಡಿಗಳಹಿಂದೆ ಅಡಗಿದ್ದ ಕಾಮುಕ ಚೇಷ್ಟೆಗಳ ನಿಜಾರ್ಥ ಅವನಿಗೆ ತಿಳಿಯದಿದ್ದರೂ ತಿಳಿಯದವನಂತೆ ನಟಿಸಿದ. ಸರ್ ವೀನ್ನೀಯು ಮತ್ತು ಇವೆತ್ ತನ್ನ ಹತ್ತಿರ ಬರುವುದನ್ನು ಕಂಡು ಹರುಷಗೊಂಡು ಹುಮ್ಮಸದಿಂದ "ಸರ್‌ವೀನ್ನೀಯವರೇ

ಮತ್ತೊಂದು ಸಂತೋಷದ ಮಾತು. ಮೊನ್ನೆ ತಾನೇ ಬೂಗೀವಾಲ್ (Bougival) ಎಂಬಲ್ಲಿ ಸುಂದರವಾದ ವಿಲಾಸ ಗೃಹವನ್ನು ಬಾಡಿಗೆಗೆ ಹಿಡಿದಿರುವೆನು. ಅಲ್ಲಿ ಎರಡು ತಿಂಗಳ ವರೆಗೆ ಇರಲು ನಿಶ್ಚಯಮಾಡಿದ್ದೇನೆ. ತಾವುಗಳು ಅಲ್ಲಿಗೂ ಬಂದು ನಮಗೆ ಹರುಷ ಆನಂದಗಳನ್ನುಂಟು ಮಾಡ ಬೇಕೆಂದು ನನ್ನ ಇಚ್ಛೆ. ಬರುವ ಸೋಮವಾರವೇ ಅಲ್ಲಿಗೆ ಹೋಗು ವೆವು. ನಂತರ ಬರುವ ಶನಿವಾರದ ರಾತ್ರಿ ಊಟ ನಮ್ಮಲ್ಲಿಯೇ ಆಗಬೇಕು. ಆದಿತ್ಯವಾರ ಪೂರ್ತಿ ನಿಮ್ಮೊಂದಿಗೆ ಸಂತೋಷದಲ್ಲಿ ಕಳೆಯುವುದೆಂದು ನಿಶ್ಚ ಯಿಸಿದ್ದೇನೆ" ಎಂದು ಹೆಚ್ಚಿನ ಉತ್ಸಾಹದ ಆಮಂತ್ರಣವನ್ನಿತ್ತಳು.

ಇವೆತ್‌ಳ ಮುಖದಲ್ಲಿ ಉದ್ರೇಕವೇನೂ ಕಂಡು ಬರಲಿಲ್ಲ. ನಸುನಗುತ್ತ "ಅದೇನಮ್ಮ! ಇವರು ಖಂಡಿತವಾಗಿಯೂ ಬರುವರು. ನಮ್ಮ ಜತೆಯಲ್ಲಿ ರುವುದೆಂದರೆ ಇವರಿಗೆ ಬಹು ಪ್ರೀತಿ. ನೀನು ಆಮಂತ್ರಿಸುವುದೇ ತಡ; ಒಲ್ಲೆ ನ್ನುವ ಸ್ವಭಾವ ಇವರದಲ್ಲ" ಎಂದು ದನಿಗೂಡಿಸಿದ ಇವೆತ್‌ಳ ಮಾತಿ ನಲ್ಲಿ ಹಿರಿಯ ಸಂದೇಶವಿತ್ತೆಂದು, ಅದರ ನಿಜಾರ್ಥ ತನಗೊಬ್ಬನಿಗೇ ತಿಳಿ ಯಬೇಕೆಂದು ಹಾಗೆ ಮಾತನಾಡಿರುವಳೆಂದು ಸರ್‌ವೀನ್ನೀಯು ಭಾವಿಸಿದ.

ಓಬಾರ್ದಿಯು ಸಾವಾಲ್‌ನನ್ನುದ್ದೇಶಿಸಿ "ಬ್ಯಾರನ್ನರೇ, ತಾವೂ ಖಂಡಿತ ಬರಬೇಕು;" ಎಂದು ಹೇಳುವಾಗ ಕಪ್ಪಡರಿದ ಅವಳ ಅರಳಿದ ಕಣ್ಣುಗಳು ಹೆಚ್ಚು ಮಿನುಗಿದುವಲ್ಲದೆ, ತನ್ನ ಕರೆಯನ್ನು ಒಪ್ಪಲೇ ಬೇಕೆಂಬ ಆದರದ ಸಂದೇಶವಿತ್ತೆಂದು ಭಾವಿಸಿದ ಸಾವಾಲ್‌ನು ಮರ್ಯಾದೆ ಗೆಂದು ಮೈಬಾಗಿಸಿ "ನಿಮ್ಮಂಥ ರಸಿಕರ ಜತೆ ಇರುವುದು ನನ್ನ ಭಾಗ್ಯವೇ ಸರಿ. ನಿಮ್ಮ ಕರೆಗೆ ನಾನು ಬಹುಋಣಿ" ಎಂದು ಹೇಳಿದ.

ವಿಜಯವನ್ನು ಸಾರುವ ಯೋಧನಂತೆ, ಹುರುಪಿನಿಂದ ಹೆಮ್ಮೆ ಕುಚೇಷ್ಟೆಗಳಿಂದ ಮಿಶ್ರಿತವಾದ ನಗುವಿನಿಂದ "ಆಯಿತು ಇನ್ನೇನು? ನನ್ನ ವಿಜಯೋತ್ಸವದಲ್ಲಿ ಉತ್ಸುಕರಾಗಿ ಪಾಲುಗಾರರಾಗಿ ಬರಲೊಪ್ಪಿದ ನನ್ನ ರಸಿಕ ಮಿತ್ರರಿಗೆ ಒಂದು ಅತ್ಯುತ್ತಮ ಪ್ರಸಂಗವನ್ನೊದಗಿಸಿ ಅವ ರನ್ನು ಹುಚ್ಚೆಬ್ಬಿಸಲು ನನಗೆ ಅನುಕೂಲವಾಯಿತು. ಮಸ್ಕೇಡರ ನೆರ ವಂತೂ ಇದ್ದೇ ಇದೆ. ಇವರ ಜತೆಗೆ ಈ ಪಂದ್ಯಾಟದಲ್ಲಿ ಭಾಗವಹಿಸಲು ಬರಲಿರುವ ಇತರ ಸ್ಪರ್ಧೆಗಾರರ ಗುಂಪು ಹೆಚ್ಚಿದಂತೆಲ್ಲ ನನಗೆ ಹೆಚ್ಚಿನ

ಸಂತೋಷ; ಆನಂದ" ಎಂದು ಹೇಳುವ ಇವೆತ್‌ಳನ್ನೇ ಎವೆ ಇಕ್ಕದೇ ನೋಡುತ್ತ ದೂರ ನಿಂತ ಶ್ರೀಮಂತ ತರುಣರ ಕಡೆ ಬೆರಳು ಮಾಡಿ ತೋರಿಸಿದಳು.

"ಇವೆತ್, ನೀನು ನಿನ್ನ ಆಟವನ್ನು ಮನಬಂದಂತೆ ಆಡಿಬಿಡು" ಎಂದು ಸಲುಗೆಯಿಂದ ನುಡಿದ ಮಾತಿಗೆ ಸಾವಾಲ್‌ನು ನಡುವೆ ಬಂದು "ಇವೆತ್, ಸರ್‌ವೀನ್ನೀಯನ್ನು 'ಮಃಸ್ಕಿಡೆ'ಂದು ಕರೆಯಲು ಕಾರಣವೇನೆಂಬುವುದನ್ನು ನಾನು ತಿಳಿಯಬಹುದೆ?" ಎಂದು ಕೇಳಿದ.

ಇವೆತ್‌ಳು ನಿರ್ಭಿಡಿಯದ ಸ್ವರದಲ್ಲಿ "ಇದರಲ್ಲೇನು ಗುಟ್ಟು? ಇವರು ಯಾವಾಗಲೂ ನನ್ನ ಕೈ ಹಿಡಿತದಿಂದ ಜಾರುವರು. ನನ್ನ ಹಿಡಿತದಲ್ಲಿದ್ದಂತೆ ಭಾವಿಸಿರುವಾಗ ಅಕಸ್ಮಾತ್ತಾಗಿ ತಪ್ಪಿಸಿಕೊಳ್ಳುವರು. ಇನ್ನೇನು ನನ್ನವರೇ ಎಂದು ನೆನೆಯುವ ಹೊತ್ತಿಗೆ ದೂರ ಸರಿದಂತೆ ವರ್ತಿಸುವರು. ಇವರ ವರ್ತನೆಯಲ್ಲಿರುವ ಈ ಚಂಚಲತೆಯೇ ಕಾರಣ" ಎಂದು ವಿಶದೀಕರಿಸಿದಳು.

ಇವರ ಈ ಹರಟೆಯಲ್ಲಿ ಆಸ್ಥೆ ಇಲ್ಲದ ಸ್ವಭಾವದಿಂದ ಮದಾಮ್ ಓಬಾರ್ದಿಯು ತಾತ್ಸಾರದ ಸ್ವರದಲ್ಲಿ "ನೀವೆಲ್ಲಾ ಇನ್ನೂ ಅರಿಯದವರು. ನಿಮ್ಮ ಮಾತುಗಳಲ್ಲಿ ಹುರುಳಿಲ್ಲ; ಬರೀ ಜೊಳ್ಳು" ಎಂದು ನೀರಸದಿಂದ ನುಡಿದಾಗ ಇವೆತ್‌ಳು ಅದಕ್ಕೆ ಬೆಂಬಲ ಕೊಡದೆ, "ಇಲ್ಲಮ್ಮಾ! ನಮ್ಮ ಈ ಮಾತು ಕೆಲಸಕ್ಕೆ ಬಾರದ ಹರಟೆಯಾಗಲಾರದು. ಇದು ಕುಚೇಷ್ಟೆಯೂ ಅಲ್ಲ; ಅನುಭವವಿಲ್ಲದ ಮಾತೂ ಅಲ್ಲ. ಸ್ಪಷ್ಟವಾಗಿ ನುಡಿಯುವುದು ನನ್ನ ಸ್ವಭಾವ. ಮುಸ್ಕೀಡರನ್ನು ಕಂಡರೆ ನನಗೆ ಬಲು ಪ್ರೀತಿ. ಅವರ ಹೃದಯವನ್ನು ಅರಿಯಲು ಸಮೀಪಿಸಿದರೆ ಅವರು ದೂರ ಸರಿಯುತ್ತಿರುವಂತೆ ಕಂಡು ಬರುತ್ತದೆ. ಆದರಿಂದ ನನಗೆ ಹೆಚ್ಚಿನ ನೋವು ಆಗುವುದಿಲ್ಲವೇನು? ನನಗಾದ ಅನುಭವವನ್ನು ಬಿಚ್ಚು ಮಾತಿನಲ್ಲಿ ಹೇಳಿ ಬಿಟ್ಟರೆ ತಪ್ಪೇನು?"

ಸರ್‌ವಿನ್ನೀಯು ಅವಳ ಮುಂದೆ ಬಾಗಿ, "ಇವೆತ್ ಇನ್ನು ಮುಂದೆ ನಾನು ದೂರ ಸರಿದು ನಿಂತು ನಿನ್ನ ಮನ ನೋಯಿಸುವುದಿಲ್ಲ. ರಾತ್ರಿ, ಹಗಲು, ಸರ್ವ ಸಮಯಗಳಲ್ಲೂ ನಿನ್ನ ಹತ್ತಿರವೇ........ಮತ್ತೇನು?"

ಎಂದು ತನ್ನ ನಿಶ್ಚಯವನ್ನು ತಿಳಿಸಿದ.

ಈ ಮಾತಿಗೆ ಇವೆತ್‌ಳು ಬೆದರಿ ನಿಂತಳು. ವಿಸ್ಮಯದಿಂದ ಅವಳ ಕಣ್ಣರಳಿದವು. ''ಇದೇನು! ಚೆನ್ನಾಯಿತು! ನಿಮ್ಮ ಮಾತಿನ ಅರ್ಥ ವೇನು? ಹಗಲಿನಲ್ಲಿ ನಿಮ್ಮ ಜತೆಯಲ್ಲಿರುವುದನ್ನು ನಾನು ಸಹಿಸಬಲ್ಲೆ; ಆದರೆ ರಾತ್ರಿಗಳಲ್ಲಿಯೂ ನನ್ನನ್ನು ಕಾಡುವುದಾದರೆ........"

''ಆದರೇನಾಯಿತು? ಅದೇಕೆ?" ಎಂದು ತಲೆತಿರುಕನಂತೆ ಸರ್‌ವೀನ್ನೀಯು ಕೇಳಿದ.

ಈ ಪ್ರಶ್ನೆಗೆ ಉದ್ವೇಗಗೊಳ್ಳದೇ ಧೈರ್ಯದಿಂದ "ಅದೇಕಂದರೆ,ರಾತ್ರಿಯಲ್ಲಿ ನಿಮ್ಮನ್ನು ಈ ಆಕಾರದಲ್ಲಿ ನೋಡಿದರೆ ನನಗೆ ಭಯವೆನಿಸುವುದು" ಎಂದು ಹೇಳಿ ಸುಮ್ಮನಾದಳು.

"ಏನು ನಿಮ್ಮ ಹುರುಳಿಲ್ಲದ ಮಾತಿನ ರೀತಿ? ಅರ್ಥವಿಲ್ಲದ ಮಾತಿನಿಂದೇನು ಪ್ರಯೋಜನ? ನಿಮ್ಮ ಹುಡುಗಾಟಿಕೆಯು ಈ ಮಾತಿನಲ್ಲಿ ಸದ್ವರ್ತನೆಯೇ ಕಾಣಲೊಲ್ಲದು. ಇಂತಹ ಸಣ್ಣ ವಿಷಯಗಳೂ ನಿಮಗೆ ಅರ್ಥವಾಗುವದಿಲ್ಲವೇ?" ಎಂದು ಸಿಟ್ಟಿನಿಂದ ಓಬಾರ್ದಿಯು ನುಡಿದಳು.

''ನಿಮ್ಮ ಮಾತಿಗೆ ನನ್ನ ಬೆಂಬಲವೂ ಇದೆ''ಎಂದು ಸರ್‌ವೀನ್ನೀಯು ದನಿಗೂಡಿಸಿದ.

ಈ ಹೊತ್ತಿಗೆ ಕೊಂಚ ಸಿಟ್ಟಿಗೆದ್ದ ಸ್ವಭಾವದಿಂದ ಇವೆತ್‌ಳು ನೊಂದ ಸ್ವರದಲ್ಲಿ ಅವನ ಕಡೆ ದೃಷ್ಟಿ ಸಾರಿ, ''ನೀವೇಕೋ ಬಹು ತುಂಟರಾದಿರಿ. ಇಂತಹ ವರ್ತನೆ ನಿಮ್ಮಲ್ಲೇನೂ ಹೊಸತಲ್ಲ; ನನಗೆ ಅಪರಿಚಿತವೂ ಅಲ್ಲ'' ಎಂದು ಬಿರುಸಾಗಿ ನುಡಿದು ಪಕ್ಕದಲ್ಲಿ ನಿಂತ ಇನ್ಸ್ಮೋರ್ವ ಯುವಕನನ್ನುದ್ದೇಶಿಸಿ ''ಓ ಯೋಧನೆ! ಇಲ್ಲಿ ಇವರಿಂದ ನನಗೆ ಅವಮಾನವಾಗುತ್ತಿದೆ. ನೀವು ನನ್ನ ಪರವಾಗಿ ವಾದಿಸಲಾರಿರಾ?" ಎಂದು ಕೇಳಿಕೊಂಡಳು.

ತೆಳುವೈಯ್ಯವನೊಬ್ಬನು ವಿನಯದಿಂದ ಬಾಗಿ ಮಣಿದೆದ್ದು ಕೊಂಚ ಮುಂದೆ ಬಂದು ''ಯಾರು ನಿಮ್ಮನ್ನು ಅವಮಾನಗೊಳಿಸಿದ ಅಪರಾಧಿ?'' ಎಂದು ನಗೆಯಲ್ಲಿ ಕೇಳಿದ.

ಇವೆತ್‌ಳು ತನ್ನ ಕಣ್ಸನ್ನೆಯಿಂದ ಸರ್‌ವೀನ್ನೀಯ ಕಡೆ ಸೂಚಿಸಿದಳು. ಮತ್ತೆ ಅವನನ್ನುದ್ದೇಶಿಸಿ ''ಈ ಯುವಕರನ್ನು ಕಂಡರೆ ನನಗೆ ಅಭಿ

ಮಾನ. ಸರ್‌ವೀನ್ನೀಯವರೇ, ಇವರು ನಿಮ್ಮಂತೆ ನನ್ನನ್ನು ಹೆಚ್ಚಾಗಿ ಕಾಡು ವುದಿಲ್ಲ'' ಎಂದು ಹೇಳಿದ ಮಾತಿಗೆ ಆ ಯುವಕನು ತನ್ನ ಕೃತಜ್ಞತೆಯ ಸೂಚಕ ನಮಸ್ಕಾರದಿಂದ ಅವಳನ್ನು ಸಂತೈಸಿ ''ಇದರಲ್ಲೇನು ಅಂತಹ ಹೊಗಳಿಕೆಯ ಮಾತು? ನನ್ನಲ್ಲಿ ಉತ್ಸಾಹ ಕಡಿಮೆಯಾಗಿರ ಬಹುದು; ಆದರೆ ನಿಮ್ಮಲ್ಲಿ ನನಗಿರುವ ಪ್ರೀತಿ, ವಿಶ್ವಾಸಗಳ ಆಳವೆಂತಹ ದೆಂಬುವುದನ್ನು ಬರೀ ಮಾತಿನಿಂದ ಹೇಳಲಾರೆ'' ಎಂದು ತಡವರಿಸುತ್ತ ನುಡಿದ. ಮತ್ತೆ ಇವೆತ್‌ಳು ಇನ್ನೊಬ್ಬನನ್ನು ಪರಿಚಯ ಮಾಡಿಕೊಟ್ಟಳು. ಸ್ಥೂಲಕಾಯನೂ, ಎತ್ತರದ ಮೈಕಟ್ಟುಳ್ಳವನೂ,ಶ್ರೀಮಂತಿಕೆಯ ಜೊತೆಗೆ ದಡ್ಡತನದ ಹೆಡ್ಡನೂ ಆದ ಬೆಲ್‌ವೀನೀಯನನ್ನು ತೋರಿಸಿ "ಇವರು ನನ್ನನ್ನು ವರಿಸಲು ಹಾತೊರೆಯುವರಲ್ಲಿ ಅತಿ ಉತ್ಸುಕರು.ಇವರಿಗೇನೆಂದು ಹೆಸರಿಡಲಿ. ಆ, ಆ ನೆನಪಾಯಿತು; 'ಕಲೋಸಸ್' ಎಂದು ಕರೆದರೆ ಓಢ್ರ ದೇಶದ ಭವ್ಯವಾದ ಎತ್ತರವಾದ ಜಗತ್ಪ್ರಸಿದ್ಧ ಕಲೋಸಸ್ ಸ್ಥಂಭದಂತೆ ನೀವೂ ಈ ಜನರಲ್ಲಿ ಕಾಣುವಿರಿ. ಈ ಹೆಸರೇ ಇರಲಿ. ನಿಮ್ಮ ಮಿತ್ರರು ನಿಮಗಾಗಿ ಕಾಯುತ್ತಿರಬಹುದು. ಇನ್ನು ನಾನು ಬರಲೆ.ಸಂಗೀತ ಕಾರ್ಯಕ್ರಮ ಆರಂಭವಾಗಲಿದೆ." ಎಂದು ಅವಸರದಿಂದ ವಾದ್ಯಗಾರರ ಮೇಳವನ್ನು ಸಮೀಪಿಸಿದಳು ಇವೆತ್.

ಓಬಾರ್ಡಿ ಶ್ರೀಮಂತಳು ತನ್ನ ಸಮ ವಯಸ್ಸಿನ ಮಿತ್ರರೊಂದಿಗೆ ಹರಟೆಯಲ್ಲಿ ಮಗ್ನವಾಗಿದ್ದಳು. ಸರ್‌ವೀನ್ನೀಯು ಅವಳನ್ನು ಸಮೀಪಿಸಿ ದಾಗ " ನೀವು ಯಾವಾಗಲೂ ಹೀಗೆಯೇ: ನನ್ನ ಮಗಳನ್ನು ಕಾಡುವಿರಿ; ಅದರಿಂದ ಅವಳು ರೇಗುವಳು; ಈ ಕಾರಣದಿಂದ ಇತರ ಜನರು ಅವಳನ್ನು ನಿಜವಾಗಿಯೂ ಅರ್ಥ ಮಾಡಿಕೊಳ್ಳುವುದಿಲ್ಲ" ಎಂದು ನಗುತ್ತ ಹೇಳಿದಳು.

ಸರ್‌ವೀನ್ನೀಯು ಸುಮ್ಮನಿರದೆ " ನೀವೇಕೆ, ಅವಳನ್ನು ಕಾಲೇಜಿಗೆ ಕಳುಹಿ ಓದು ಮುಗಿಸಲಿಲ್ಲ?" ಎಂದನು.

ಆ ಮಾತು ಅವಳು ಅರ್ಥ ಮಾಡಿಕೊಳ್ಳಲಿಲ್ಲ. ಆದರೂ ಸ್ನೇಹದ ಸರಣಿಯಲ್ಲಿ ಮಾತು ಮುಂದರಿಸುತ್ತಿರುವಾಗ ಯೋಚನಾಪರವಶನಾದ ಮತ್ತೋರ್ವನನ್ನು ಸಮೀಪಿಸಿ " ಇದೇನು ನಮ್ಮ ಅದೃಷ್ಟ, ಯುವರಾಜರೆ! ಯಾಕೆ ಯೋಚನೆ?" ಎಂದಳು.

ಸರ್‌ವೀನ್ನೀಯು, ಸಾವಾಲ್‌ನ ಕೈ ಹಿಡಿದು ಸ್ವಲ್ಪ ದೂರ ಸರಿದು "ಅವನೇ ರಾಜಪುತ್ರ ಕ್ರಾವಲೋವನು. ಇವೆತ್‌ಳ ಪ್ರೀತಿಯನ್ನು ಸಂಪಾದಿಸಲು ಬಂದಿರುವವರಲ್ಲಿ ಹೊಸಬನು. ಇವೆತ್‌ಳು ಹೆಚ್ಚಿನ ಸುಂದರಿಯಲ್ಲವೇ?" ಎಂದು ಕೇಳಿದ. ಸಾವಾಲ್‌ನು, "ಇಬ್ಬರೂ ಚೆಲುವಿಯರೇ. ಅವರಲ್ಲಿ ತಾಯಿಯೇ ನನಗೆ ಪ್ರೀತ್ಯಾಸ್ಪದಳು; ನನಗೆ ಸರಿ ಜೋಡು" ಎಂದು ಹೇಳಿದ.

ನೃತ್ಯದಲ್ಲಿ ಮಗ್ನರಾದ ಜನರು ಮುಂದರಿಯಲು "ಅವರಿಗೆ ಸ್ಥಳ ಮಾಡಿಕೊಟ್ಟು ನಾವು ಮತ್ತೊಂದು ಕಡೆ ಹೊರಡುವ ನಡೆ" ಎಂದು ಸರವೀನ್ನೀಯು ಸೂಚಿಸಲು ಜೂಜಾಟದ ಕೋಣೆಗೆ ಇಬ್ಬರೂ ನಡೆದರು.

ಆ ಜೂಜಾಟದ ಗುಂಪಿನಲ್ಲಿ ಮಾತೇ ಕಡಿಮೆ. ಎಲ್ಲರೂ ಸೋಲು ಗೆಲುವಿನಲ್ಲಿ ಲೀನವಾಗಿದ್ದರು. ಆಟದ ನಡುವೆ ಸರಿದಾಡುವ ಬೆಳ್ಳಿ ಬಂಗಾರದ ನಾಣ್ಯಗಳ ಸುಳಿದಾಟದ ಹೊರತು ಬೇರೆ ಮತ್ತೇನೂ ಇರಲಿಲ್ಲ. ಅಲ್ಲಿ ಸೇರಿದ ಜನರು ನಾನಾ ಬಗೆಯ ಶೃಂಗಾರದ ಉಡುಗೆ ತೊಡುಗೆಗಳಿಂದ ಅಲಂಕೃತರಾಗಿದ್ದರು. ಎಲ್ಲರ ಮುಖದ ಮೇಲೆ ಆಲೋಚನೆಯ ಭಾವನೆಗಳು ಮೂಡಿದ್ದವೇ ಹೊರತು ಯಾರಲ್ಲಿಯೂ ಉತ್ಸಾಹವಿರಲಿಲ್ಲ.

ನಾನಾ ದೇಶದ ಜನರು ತಮ್ಮ ದೇಶದ ವಾಡಿಕೆಯಂತೆ ಗಡ್ಡ ಬೆಳೆಸಿದ್ದರು. ಅಮೇರಿಕನ್ನರ ಚೂಪಾದ ಗಡ್ಡ, ಸೊಕ್ಕಿನ ಇಂಗ್ಲೀಷಿನವರು ಹರಡಿದ ಗಡ್ಡ, ಸ್ಪೇನ್ ದೇಶದ ಕಣ್ಣಿನ ಪರ್ಯಂತ ಹಬ್ಬಿಕೊಂಡ ಗಡ್ಡ, ರೋಮ್ ದೇಶದವನ ಬಲವಾದ ಮೀಸೆಯುಳ್ಳ ಗಡ್ಡ, ಆಸ್ಟ್ರಿಯದ ಅಲಂಕಾರಯುಕ್ತವಾದ ಗಡ್ಡ, ರಷಿಯನ್ನನ ಮೀಸೆಗಳು ತುಟಿಯ ಎರಡು ಪಕ್ಕದಲ್ಲಿ ಎದ್ದು ನಿಂತು ಗಡ್ಡದ ಮೇಲೆ ಆಕ್ರಮಿಸಿರುವ ಹಾಸ್ಯಮಯ ಗಡ್ಡ, ಮುಂತಾದ ಈ ನಾನಾ ಬಗೆಯ ಮುಖದ ಅಲಂಕಾರಗಳು ಆಯಾ ದೇಶದ ಕ್ಷೌರಿಕರ ನಿಪುಣತೆ, ಮತ್ತು ಆಯಾ ದೇಶದ ಜನರ ಲಕ್ಷಣವನ್ನು ವ್ಯಕ್ತಗೊಳಿಸುತಿದ್ದುವು.

"ನೀನು ಆಟದಲ್ಲಿ ಸೇರುವುದಿಲ್ಲವೇ ಸಾವಾಲ್?"

"ಇಲ್ಲ. ನೀನು?"

"ಇಂದು ಬೇಡ, ಬೇಕಾದರೆ ಮತ್ತೊಂದು ದಿನ ವಿರಾಮವಾಗಿ ಬಂದು

ಆಡುವ. ನೀನೂ ಬರುವ ಹಾಗಿದ್ದರೆ ಮನೆಗೆ ಹೋಗುವ. ಇಲ್ಲಿ ಹೆಚ್ಚು ಜನ ಸೇರಿರುವರು. ನಮ್ಮ ಆಟ ಇಲ್ಲಿ ಸಾಗುವುದಿಲ್ಲ."

" ಹಾಗಾದರೆ ನಡೆ ಹೋಗುವ.''

ಇಬ್ಬರೂ ಬಾಗಿಲ ಬಳಿ ತೂಗು ಹಾಕಿದ್ದ ಪರದೆಯ ಹಿಂದಿನಿಂದ ದೊಡ್ಡ ಹಾಲಿನಿಂದ ಬಂದು ರಸ್ತೆಗೆ ಸೇರಿದರು.

" ಸಾವಾಲ್ ನಿನ್ನ ಅಭಿಮತವೇನು ?"

" ಇದೆಲ್ಲವೂ ಬಹು ವಿಚಿತ್ರವೆನಿಸುತ್ತದೆ. ಇಲ್ಲಿ ಸೇರುವ ಜನರಲ್ಲಿ ಹೆಂಗಳೆಯರದೇ ಬಹು ವಿಚಿತ್ರ ದೃಶ್ಯ.''

" ಅದೇ ನಮಗೆ ಬೇಕಾದದ್ದು ? ಇಲ್ಲಿ ಅತ್ಯುತ್ತಮ ಜಾತಿಯ ಸ್ತ್ರೀಯರು ಬರುವರು. ಇದೊಂದು ಹಬ್ಬದಂತೆ ನಮಗೆನಿಸುವುದಿಲ್ಲವೆ ? ಈ ಸುಂದರ ಭವನದಲ್ಲಿ ಪ್ರವೇಶ ಮಾಡಿದ ಕೂಡಲೇ ನಾವು ಪ್ರೇಮಲೋಕದಲ್ಲಿ ನಿಂತಂತೆನಿಸುತ್ತದೆ. ವಾಸನಾ ದ್ರವ್ಯಗಳನ್ನು ಮಾರುವ ಅಂಗಡಿಕಾರನಲ್ಲಿ ಹೋದ ಕೂಡಲೇ ನಮಗೆ ಸುವಾಸನೆಯ ವಾತಾವರಣ ಉಂಟಾಗುವಂತೆ ಈ ದಿವ್ಯ ಮಂದಿರದಲ್ಲಿ ಪ್ರೇಮ ದೇವತೆ ತಾಂಡವವಾಡುತ್ತಿರುವಂತೆನಿಸುತ್ತದೆ" ಎಂದು ಸರ್ವೀನ್ನೀಯು ಹೇಳಿದ.

" ಅಹುದು ಮಿತ್ರ: ಇಂತಹ ಸ್ಥಳಗಳಿಗೆ ವಿಲಾಸಿಗಳು ಹೋಗಬೇಕಾದುದು ಶೀರ ಅವಶ್ಯ. ಈ ವಿಲಾಸಿಗಳ ಚತುರತೆ, ಕುಶಲತೆಯನ್ನು ನೋಡಿ ನಾನು ಬೆರಗಾದೆ. ಇಲ್ಲಿಯ ಜನರ ಮಾತುಗಾರಿಕ, ಅವರ ಕಲಾಪ್ರಿಯತೆ, ಅವರ ಕುಶಲತೆ ನನ್ನನ್ನು ಮುಗ್ಧಗೊಳಿಸುತ್ತದೆ. ರೊಟ್ಟಿ ಅಂಗಡಿಯಲ್ಲಿ ನೋಡಲು ಬಹು ಚೆನ್ನಾಗಿ ಕಾಣಿಸುವ ರೊಟ್ಟಿಗಳನ್ನು ತಿಂದ ಪರಿಚಯವಿದೆ ತಾನೆ ? ಅವುಗಳು ನೋಡುವುದಕ್ಕೆ ಮಾತ್ರ ಬಹು ಅಂದ. ಆದರೆ ಅವು ನಮ್ಮ ಹಸಿವನ್ನು ತಣಿಸಲಾರವು. ಹಿತವೂ ಅಲ್ಲ. ಹೀಗಿದೆ ಇಲ್ಲಿಯ ಪ್ರೇಮ ವ್ಯವಹಾರ; ಅಲ್ಲವೆ? ಮದಾಮ್ ಓಬಾರ್ದಿಯು ನೀಡುವ ಪ್ರೇಮ ಜಾಲ ಈ ಬಗೆಯದೆಂದು ನನ್ನ ನಿರ್ಧಾರ. ನಾವು ಈ ಬೆಡಗಿಗೆ ಮೋಹಗೊಂಡು 'ಕಡಿಮೆ ಬೆಲೆಯ ವಸ್ತುವನ್ನು ಹೆಚ್ಚು ಬೆಲೆ ಕೊಟ್ಟು ಕೊಳ್ಳುವೆವು. ಹೀಗಿದೆ ಇಲ್ಲಿಯ ಪ್ರೇಮ ಕಾಮದ ಚೆಲ್ಲಾಟ''

" ಈ ಮನೆಯ ಅಧಿಕಾರ ಪುರುಷನು ಯಾರು ?'' ಎಂದು ಸಾವಾ

ಲ್ ನು ಕೇಳಿದ.

ತನಗೆ ತಿಳಿಯದೆಂದು ತಲೆಯಲ್ಲಾಡಿಸಿದ ಸರ್ ವೀನ್ನೀಯು. ಆದರೂ "ನನ್ನ ಅರಿವಿನಂತೆ ಓರ್ವ ಇಂಗ್ಲೆಂಡದ ಶ್ರೀಮಂತನು ಈ ಮನೆಯನ್ನು ಆಕ್ರಮಿಸಿದ್ದನೆಂತಲೂ, ಮೂರು ತಿಂಗಳ ಹಿಂದೆ ಈ ಮನೆ ಬಿಟ್ಟು ಹೋದ ನೆಂತಲೂ ತಿಳಿದು ಬಂದಿದೆ ಮಾದಾಮ್ ಓಬಾರ್ದಿಯು ಈಗಿನ ಜೀವನಕ್ಕೆ ಇದೇ ರೀತಿಯ ವ್ಯವಸಾಯವೇ ಗತಿ. ಇದರಿಂದಲೇ ಅವಳು ಜೀವಿಸುತ್ತಿರುವಳು. ಮುಂದಿನ ಶನಿವಾರ ನಮಗೆ ಇವಳ ಜತೆಯಲ್ಲಿ ಸಂಜೆ ಊಟವೆಂದು ನಿಶ್ಚಯವಾಗಿದೆ; ನೆನಪಿರಲಿ. ಬೊಗೀವಾಲ್‌ದಂಥ ಹಳ್ಳಿಯ ವಾತಾವರಣದಲ್ಲಿ ಸ್ತ್ರೀಯರು ಮನಬಿಚ್ಚಿ ಮಾತನಾಡಬಹುದು. ಇವೆತ್‌ಳ ಮನಸ್ಸಿನಲ್ಲಿ ಇರುವ ನಿರ್ಧಾರವೇನೆಂಬುದನ್ನು ತಿಳಿದುಕೊಂಡೇ ಬಿಡುವೆನು." ಎಂದು ಸರ್ ವೀನ್ನಿಯು ತನ್ನ ನಿರ್ಧಾರವನ್ನು ಹೇಳಿದ.

"ಆಗಬಹುದು. ಮುಂದಿನ ಶನಿವಾರ ನನಗೆ ಯಾವ ಕೆಲಸವೂ ಇಲ್ಲ ಮಧ್ಯಾಹ್ನಕ್ಕೆ ಅಲ್ಲಿಗೆ ಬರಬೇಕೆಂದು ಅವಳ ಇಚ್ಛೆಯಲ್ಲವೆ?"

"ಹೌದು ಸಾವಾಲ್. ನಾವು ಮುಂಚಿತವಾಗಿಯೇ ಅಲ್ಲಿಗೆ ಹೋಗುವ"

ಇವರು ರಾತ್ರಿ ಕತ್ತಲಲ್ಲಿ ಮುಂದರಿದು ಹೋಗುವಾಗ ನಗರದ ವನಗಳಲ್ಲಿ ನಡೆಯುತ್ತಲಿದ್ದ ಪ್ರೇಮ ವ್ಯಾಪಾರದ ದೃಶ್ಯಗಳನ್ನು ನೋಡುತ್ತ ಮುಂದೆ ಸಾಗಿದರು. "ಇದೇನು ಹುಚ್ಚು ಇಂತಹ ಹುಚ್ಚಾಟವೇ? ಕಾಮ ಲೀಲೆಗಳು ಬಹಿರಂಗದಲ್ಲೇ? ಇದು ಅವಿವೇಕದ ಪರಮಾವಧಿ. ಪ್ರೇಮ ಕಾಮ ವೆಂಬುದು ಇಷ್ಟು ನಗೆಚಾಟಿಕೆಯ ವ್ಯವಹಾರವೇ? ಪ್ರೇಮವನ್ನು ನಾವು ಕೊಡುವ ಹಣದ ಬೆಲೆಯಿಂದ ಅಳೆಯಲಾಗದು. ಹೃದಯದ ಆವೇಗದಿಂದ ಅಳೆಯ ಬೇಕೆಂದು ತತ್ವ ಜ್ಞಾನಿಗಳು ಹೇಳುತ್ತಾರೆ. ಆದರೂ ಇದೆಲ್ಲ ಒಗಟಾಗಿಯೇ ಉಳಿದಿದೆ. ಅದೇನೆ ಇರಲಿ, ಮುಂದಿನ ಶನಿವಾರ ನನ್ನ ಪರೀಕ್ಷಾ ಸಮಯ. ಇವೆತ್‌ಳ ಮೊದಲ ಪ್ರಿಯತಮನಾಗುವ ಅದೃಷ್ಟ ನನ್ನದಾಗುವದೋ ಇಲ್ಲವೋ ಎಂಬುದು ನಿರ್ಧಾರವಾಗುವ ದಿನವದು. ನೋಡಿಯೇ ಬಿಡುವ." ಎಂದು ಸರ್ ವೀನ್ನೀಯು ಮನದಲ್ಲಿಯೇ ನೆನೆದು "ಅವಳ ಪ್ರೇಮಹಸ್ತವನ್ನು ಪಡೆಯಲು ನಾನು........ಏನಾದರೂ ಕೊಡಲು......." ಎಂದು ನುಡಿದು ಸುಮ್ಮನಾದ. ಸರ್ ವೀನ್ನೀಯ ಮನೆ ಸಮೀಪಿಸಿದುದರಿಂದ ಗೆಳೆಯರು ಅಂದಿಗೆ ಅಗಲಿದರು

೨

# ಬೂಗೀವಾಲ್‌ದ ವಿಲಾಸ ಮಂದಿರ

ಓಬಾರ್ದಿಯ ಮನೆಯು ಸುಂದರವಾದುದು ಅಲ್ಲಿಂದ ನದಿಯ ಹರವು ಕಾಣುತ್ತಿತ್ತು. ಮಾದಾಮ್ ಓಬಾರ್ದಿಯು ಬಾಡಿಗೆಗೆ ತೆಗೆದುಕೊಂಡಿದ್ದ ಭವನ ಒಂದು ಎತ್ತರವಾದ ದಿನ್ನೆಯ ಮೇಲೆ ನಿರ್ಮಿತವಾಗಿತ್ತು; ಅಲ್ಲಿಂದ ಸೀನ್ ನದಿಯು ಪೂರ್ಣ ಕಾಣುತ್ತಿತ್ತು. ಅದು ಮನೆಯ ಉದ್ಯಾನವನದ ಹತ್ತಿರವೇ ಹರಿಯುತ್ತಿತ್ತು.

ಆ ದಿನ್ನೆಯ ಎದುರಿನಲ್ಲಿ ಆ ನದಿಯ ನಡುವೆ ಕಾಣುತ್ತಿದ್ದ ಬಯಲು ಪ್ರದೇಶ ಬಹು ಮನೋಹರವಾಗಿತ್ತು. ಅಲ್ಲಿ ಗಿಡಗಳು ದಟ್ಟವಾಗಿ ಬೆಳೆದು ಕಾಮಿಗಳನ್ನು ಅತಿ ಅಕ್ಕರೆಯಿಂದ ಆಮಂತ್ರಿಸುವಂತಿತ್ತು.

ಅದು ಒಂದು ಸಂಜೆ. ಬಹು ಸುಂದರವಾದ ಸಂಜೆ ಸುಖ ಕಾಮಕ್ಕೆ ಮನಸೋತು ವಿಲಾಸದಲ್ಲಿ ಮಗ್ನರಾಗಲು ಯತ್ನಿಸುವವರಿಗೆ ಅತಿ ಆನಂದ ದಿಂದ ಬರಮಾಡಿಕೊಳ್ಳುವಂತಿತ್ತು. ಅಂದಿನ ಆ ದಿವ್ಯ ಸಂಜೆಯ ಮೋಹಕ ವಾತಾವರಣ, ಮೆತ್ತನೆ ಬೀಸುವ ಆ ಗಾಳಿಯು ಮನ್ಮಥನ ದಿವ್ಯ ಸಂದೇ ಶವನ್ನು ನೂತನ ವಿಲಾಸಿಗಳಿಗೆ ತಂದೊಡ್ಡುತ್ತಿತ್ತು. ಈ ಸುಂದರ ಪ್ರದೇ ಶವು ಸೀನ್‌ನದಿಯ ದಡದಲ್ಲಿ ತೀರ ಹತ್ತಿರ ಇರುವುದರಿಂದ ಅದರ ಚೆಲುವು ಇಮ್ಮಡಿಯಾಗಿತ್ತು ಆದೇ ತಾನೇ ಮುಳುಗಿದ ಸೂರ್ಯನು ಇಲ್ಲಿಯ ಜನರು ನಿಶಾದೇವಿಯ ಮಡಿಲಲ್ಲಿ ದಿವ್ಯ ಆನಂದವನ್ನು ಪಡೆಯಲೆಂದು ಭೂ ಪ್ರದೇ ಶದ ಇತರ ಭಾಗದಲ್ಲಿ ಕಾಮಿಗಳನ್ನು ಎಚ್ಚರಿಸಲು ಹೊರಟಂತಿತ್ತು. ಗಿಡವ ನಡುವೆ, ಎಲೆಗಳ ಪದರಿನಲ್ಲಿ ಹಬ್ಬಿದ ಕೋಮಲ ಕಾಂತಿ ಕಿಲ ಕಿಲ ಪಿಟನನ್ನು ಆಮಂತ್ರಿಸುವ ವಿಲಾಸಿನಿಯ ನಸು ನಗುವಂತಿತ್ತು. ಭೂಮ್ಯಾ ಕಾಶಗಳಲ್ಲಿ ಆಗಲೇ ನೆಲೆಸಿದ್ದ ಶಾಂತ ವಾತಾವರಣಕ್ಕೆ ಸೂರ್ಯನ ನಿರ್ಗ ಮನ ವಿಲಾಸಪ್ರಿಯರಿಗೆ ಬೇಕಾದ ಹೆಚ್ಚಿನ ಶಾಂತಿಯನ್ನು ತಂದೊಡ್ಡಿತ್ತು.

ಊಟದ ಹಾಲನ್ನು ಇವರೀರ್ವರು ಪ್ರವೇಶಿಸುವಾಗ, ಇವರನ್ನು ಕಂಡ

ಆ ಸ್ತ್ರೀಯರ ಉತ್ಸಾಹ ಹೆಚ್ಚಿದಂತೆ ಕಂಡು ಬಂತು. ಅಲ್ಲಿಯ ಆ ಊಟ ನಂದನವನದ ದಿವ್ಯ ಭೋಜನದಂತೆ ಕಂಗೊಳಿಸುತ್ತಿತ್ತು. ನಿಸರ್ಗ ನೀಡುವ ಈ ಆನಂದವಲ್ಲಿ,ಜನಜಂಗುಳಿಯ ಗಡಿಬಿಡಿಯ ಅತಿ ಕೃತ್ರಿಮ ವಾತಾವರಣ ದಿಂದ ದೂರಾಗಿ,ಪ್ರಕೃತಿಯ ಮಡಿಲಲ್ಲಿ ಭವ್ಯವಾಗಿ ವಿರಾಜಿಸುವ ಈ ಮಂದಿ ರದಲ್ಲಿ, ಊಟವೆಂದರೆ ಯಾರೂ ಬೇಡವೆನ್ನುತ್ತಿದ್ದಿಲ್ಲ; ಎಂದಮೇಲೆ ಆ ಸಮ ಯಕ್ಕಾಗಿ ಕಾದು ನಿಂತ ಕಾತರಗೊಂಡ ಸಾವಾಲ್ ಮತ್ತು ಸರ್‌ವೀನ್ನೀ ಯವರಿಗೆಸ್ವರ್ಗವೇ ಇಳಿದು ಬಂದಂತಿತ್ತು. ಊಟದ ನಡುವೆ ನಡೆದ ಮಾತುಕತೆಯ ವಿವರ ಹೀಗಿತ್ತು:

ಸಾವಾಲ್‌ನ, ಕೈಹಿಡಿಯಲು ಮದಾಮ್ ಓಬಾರ್ದಿಯು ಮುಂದೆ ಬರಲು ಅವಳ ಮಗಳಾದ ಇವೆತ್‌ಳು ಸರ್‌ವೀನ್ನೀಯ ಕೈಹಿಡಿದು ಆಹ್ವಾ ನವನ್ನಿತ್ತಳು. ಇವರಲ್ಲಿ ಈ ಕಾಮಿಗಳಿಬ್ಬರೂ ಹೆಚ್ಚಳದ ಆಕರ್ಷಣೆಯನ್ನು ಕಂಡರು.ಈ ಇಬ್ಬರಲ್ಲಿ ಹೆಚ್ಚಿನ ಸೌಂದರ್ಯ ಮನೆಮಾಡಿಕೊಂಡಿತ್ತು.ಇವೆ ತ್‌ಳು ಹೆಚ್ಚು ಮಾತಾಡುತ್ತಿರಲಿಲ್ಲ. ಅವಳೇತಕ್ಕೋ ಗಂಭೀರವಾದ ಮುಖ ಮುದ್ರೆಯಿಂದ ಸಮಯಕ್ಕೆ ಬೇಕಾದ ಎರಡು ಮಾತಗಳನಾಡಿ ಸುಮ್ಮ ನಾಗುತ್ತಿದ್ದಳು.ಪ್ಯಾರಿಸದ ಸ್ತ್ರೀಯರಿಗೆ ಅನುಗುಣವಾದ ಕುಲಕುಲು ನಗು ವಿನೊಂದಿಗೆ ಮಿನುಗುವ ಹಾಸ್ಯಪ್ರಿಯಳಾದ ಇವೆತ್‌ಳು ಒಮ್ಮೆಂದೊಮ್ಮೆ ಈ ಬಗೆಯ ಮುಖಮುದ್ರೆಯನ್ನು ತಾಳಿದುದು ಸರ್‌ವೀನ್ನೀಗೆ ಆಶ್ಚರ್ಯ ವೆನಿಸಿತು. "ಇದೇಕೆ ಇವೆತ್ ? ಇಂದೇಕೆ ನೀನು ತುಂಬಾ ಗಂಭೀರಳಾಗಿ ರುವಿ ? ಪಟ್ಟಣದಲ್ಲಿರುವಾಗ ಕಂಡುಬಂದ ಹುಮ್ಮಸ, ಮಾತುಗಾರಿಕೆ, ಆ ಹಾಸ್ಯಮಯ ಕುಚೇಷ್ಟೆ, ಎಲ್ಲಿ ? ಅವುಗಳು ಎಲ್ಲಿ ಮಾಯವಾದವು? ಹೀಗೇಕೆ ? " ಎಂದು ಅವಳನ್ನು ಕೇಳಿದ.

" ನಾನೇನು ಮಾಡಲಿ ? ಇಲ್ಲಿಯ ನಿಸ್ತೇಜ ವಾತಾವರಣ ನನ್ನಲ್ಲಿ ಈಬಗೆಯ ಬದಲಾವಣೆಯನ್ನುಂಟುಮಾಡಿದೆ. ನನಗೇಕೋ ಇಲ್ಲಿ ವಿಚಿತ್ರ ವೆನಿಸತೊಡಗಿದೆ. ದಿನವೂ ನನ್ನ ರೀತಿಚರ್ಯೆಗಳು ಬದಲಾಯಿಸುತ್ತಿವೆ. ಇದರ ಕಾರಣವೇನೆಂಬುದನ್ನು ನಾನರಿಯೆ. ಇಂದು ಹುಚ್ಚಳಂತೆ ಇರುವೆ. ನಾಳೆ ಗಂಭೀರಳಾಗುವೆ. ಮತ್ತೊಂದು ದಿನ ಕೊಂಚ ಹರುಷದಿಂದಿರುವೆ. ಇಲ್ಲಿಯ ಹವೆ ಬದಲಾದಂತೆಲ್ಲ ನನ್ನ ಸ್ವಭಾವ, ವರ್ತನೆಗಳು ಬದ

ಬಾಗುವವು. ನಾನೇನು ಮಾಡಲಿ ? ಕ್ಷಣಕ್ಷಣಕ್ಕೂ ನನ್ನ ಮನೋ ಲಕ್ಷಣ ಬದಲಾಗುತ್ತಿದೆ. ಇದರ ಕಾರಣವನ್ನು ನಾನರಿಯೆ. ನನ್ನೆದುರು ಬಂದವ ರನ್ನೆಲ್ಲ ಸಿಟ್ಟಿನಿಂದ ದೂಡಿ ಬಿಡಬೇಕೆನಿಸುವದು. ಮತ್ತೊಂದು ಸಲ ಎಲ್ಲ ರಿಂದ ದೂರ ಸರಿದು ಒಬ್ಬಳೇ ಮನಸಾರೆ ಅಳಬೇಕೆಂದೆನಿಸುವುದು. ವಿಚಿತ್ರ ಕಲ್ಪನೆಗಳು, ಯೋಚನೆಗಳು ನನ್ನನ್ನು ಹುಚ್ಚೆಬ್ಬಿಸುತ್ತಿವೆ. ದಿನವೂ ನಾನು ಏಳುವ ಸಮಯದಲ್ಲಿ ನನ್ನ ಮನಸ್ಸು ಹೇಗಿರುವುದೆಂಬುವುದನ್ನು ನಾನೆದ್ದ ಕೂಡಲೇ ಉಂಟಾಗುವ ಭಾವನೆಯಿಂದ ಊಹಿಸಬಲ್ಲೆ. ಹಿಂದಿನ ರಾತ್ರಿ ಬೀಳುವ ಕನಸುಗಳೇ ನನ್ನ ಮುಂದಿನ ದಿನದ ಭವಿಷ್ಯವನ್ನು ನಿರ್ಧರಿಸುವ ವೆಂದು ನನ್ನ ನಂಬಿಕೆ; ಇಲ್ಲವೇ ರಾತ್ರಿ ಮಲಗುವವೇಳೆ ನಾನು ಓದುವ ಪುಸ್ತಕವನ್ನೇ ಅನುಸರಿಸುವವೆಂದರೂ ಸರಿಯೇ''

ಕೊರಳಸುತ್ತು ಆವರಿಸಿದ ಫ್ಲಾನಲ್‌ನಿಂದ ಇವೆತ್‌ಳ ಚೆಲುವು ಇಮ್ಮ ಡಿಯಾಗಿತ್ತು. ಅವಳು ತೊಟ್ಟ ಮೇಲಂಗಿಯು ಉಬ್ಬಿ ಬೆಳೆದು ನಿಂತ ಅವಳ ಶರೀರಕ್ಕೆ ಸರಿಯಾಗಿ ಹೊಂದಿಕೊಂಡಿತ್ತು. ಆಗಲೇ ವಿಕಾಸಗೊಂಡ ಅವಳ ಕುಚದ್ವಯಗಳು ಆ ಉಡಿಗೆಯಲ್ಲಿ ಚೆನ್ನಾಗಿ ಬೆರೆತುಕೊಂಡು ಅವಳ ಮೈಕ ಟ್ಟಿಗೆ ಶೋಭೆಯನ್ನು ತಂದೊಡ್ಡಿದ್ದವು. ಬಂಗಾರ ವರ್ಣದ ತಲೆಗೂದಲಲ್ಲಿ ಇಮಡಿಕೊಂಡ ಅವಳ ಮುಖ ಆದೊಂದು ಕೆತ್ತಿದ ಬೊಂಬೆಯಂತೆ ಕಾಣು ತ್ತಿತ್ತು. ಅವಳ ಸುಂದರವಾದ ಕೊರಳು ಮೈ ನಿಲುವಿಗೆ ಸರಿಯಾಗಿ ಹೊಂದಿ ಕೊಂಡು ಶೋಭಿಸುತ್ತಿತ್ತು.

ಈ ಸುಂದರ ಮೂರ್ತಿಯನ್ನು ಎವೆಯಿಕ್ಕದೆ ನೋಡುತ್ತ ಸರ್‌ವೀನ್ನಿಯು " ನೀನು ಅಪ್ಸರೆ. ನಿನ್ನ ಚೆಲುವು ಬಲು ಅಮೋಘವಾಗಿದೆ. ಇಂದಿನ ಈ ಸೊಬಗಿನಲ್ಲಿಯೇ ನಿನ್ನನ್ನು ದಿನವೂ ಕಾಣಬೇಕೆಂದು ನನ್ನ ಮನಸ್ಸು ಆಶಿಸುತ್ತಿದೆ " ಎಂದು ಹೇಳಿದ.

"ನೀವು ಹೀಗೆ ನನ್ನನ್ನು ಹೊಗಳಬೇಡಿ. ಇದರ ಪರಿಣಾಮ ಚೆನ್ನಾಗಿ ಆಗಲಾರದು. ನನ್ನ ಸಹವಾಸದಿಂದ ನಿಮಗೆ ಹೆಚ್ಚು ಸುಖವಾಗಲಾರದು. ಹೊಗಳುವಾಗ ಚೆನ್ನಾಗಿ ಯೋಚಿಸಬೇಕು, ಯುವಕರೇ" ಎಂದು ಎಚ್ಚರಿ ಸಿದಳು.

ಇವೆತ್‌ಳ ತಾಯಿ ಬಹು ಆನಂದದಲ್ಲಿದ್ದಳು. ಅವಳು ಅಂದೇಕೋ

ಕೆಂಪು ವರ್ಣದ ಅಂಚುಳ್ಳ ಕಪ್ಪು ಒಡಲಿನ ಅರಿವೆಯನ್ನು ಧರಿಸಿದ್ದಳು. ವಯಸ್ಸಾದ ಆವಳ ಮೈಗೆ ಆ ಉಡುಗೆ ಬಲು ಮಾಟವಾಗಿ ಹೊಂದಿಕೊಂಡಿತ್ತು. ನಡುನಡುವೆ ಅವಳೆದೆಯ ಮೇಲೆ ಕಾಣುತ್ತಲಿದ್ದ ಕೆಂಪು ವರ್ಣದ ಹೊಲಿಗೆ ಕೆಲಸ, ಅವಳಂದು ಕೆಂಪು ಮಾಲೆಯನ್ನೇ ಧರಿಸಿರುವಳೇನೋ ಎಂಬಂತೆ ತೋರುತ್ತಿತ್ತು. ಅವಳು ತನ್ನ ತಲೆಯಲ್ಲಿ ಮುಡಿದ ರೋಜಾ ಹೂ ಸಹಿತ ಕೆಂಪು ವರ್ಣದ್ದಾಗಿದ್ದುದರಿಂದ ಅಂದು ಕೆಂಪು ರಂಗಿನ ಮೇಲೆ ಅವಳ ಮನಸ್ಸಿತ್ತೆಂದು ಹೇಳಬಹುದು. ಅವಳ ಮೆಲು ನುಡಿ, ಮೃದು ನಡೆ, ಸಣ್ಣಗಿನ ಹಾವಭಾವಗಳು ಮೋಹಕವಾಗಿದ್ದುವು. ಇವಳ ಜತೆಯಲ್ಲಿದ್ದ ಸಾವಾಲ್‌ನು ಗಂಭೀರ ಮುಖಮುದ್ರೆಯನ್ನು ತಾಳಿದ್ದನು. ಆಗಾಗ ಚೂಪಾಗಿ ತೀಡಿದ ತನ್ನ ಗಡ್ಡವನ್ನು ಸವರಿಕೊಳ್ಳುತ್ತ ಹೆಚ್ಚು ಮಾತನಾಡದೆ ಮೌನದಲ್ಲಿಯೇ ಇದ್ದುದು ಆಶ್ಚರ್ಯವೇ ಸರಿ.

ಕೆಲವು ನಿಮಿಷಗಳ ವರೆಗೆ ಯಾರೂ ಮಾತನಾಡಲಿಲ್ಲ. ಸರ್ ವೀನ್ನೀಯು, "ಸುಮ್ಮನೇ ಮೌನದಲ್ಲಿರುವುದು ಕೆಲವೊಂದು ಸಮಯ ಒಳ್ಳೆಯದೆಂದು ನನಗೆನಿಸುತ್ತದೆ. ಮೌನದಿಂದಿರುವಾಗ ಪಕ್ಕದಲ್ಲಿರುವವರು ತೀರ ಹತ್ತಿರ ಬರುತ್ತಿರುವಂತೆನಿಸುತ್ತದೆ. ಮಾತಿನಂದ ಈ ಬಗೆಯ ಭಾವನೆ ಬರಲಾರದು, ಅಲ್ಲವೇ ಓಬಾರ್ದಿಯವರೇ?" ಎಂದು ಕೇಳಿದ.

ಆವಳು ಕೊಂಚ ತಲೆಯೆತ್ತಿ ನೋಡಿ, "ಈ ಸಲ ನೀವು ಹೇಳುವ ಮಾತು ಒಪ್ಪತಕ್ಕದ್ದೇ. ಮೌನದಲ್ಲಿ ಪ್ರೇಮ ಜೀವಿಗಳು ತಾವು ಪ್ರೀತಿಸುವ ವಸ್ತುಗಳನ್ನು, ಹೆಚ್ಚು ಆಸ್ಥೆಯಿಂದ ವಿವೇಚಿಸಬಹುದು. ಮಾತಿಲ್ಲದ ಮೌನ ಇದಕ್ಕೆ ಸಹಕಾರಿಯಾಗುತ್ತದೆ" ಎಂದು ನುಡಿದು ತನ್ನ ನೋಟ ಸಾವಾಲ್‌ನ ಕಡೆ ಬೀರಿದಳು. ಇಬ್ಬರು ಸ್ವಲ್ಪ ಸಮಯ ಎವೆಯಿಕ್ಕದೇ ನೋಡಿ ತುಸು ನಕ್ಕರು.

ಸರ್ ವೀನ್ನೀಯು ಮಾತು ಮುಂದುವರಿಸುತ್ತ ಇವೆತ್‌ಳನ್ನು ಕುರಿತು "ನಿನ್ನ ಈ ಮೌನದಿಂದ ನಾನೇನೆಂದು ತಿಳಿಯಲಿ? ನೀನು ನನ್ನಲ್ಲಿ ಪ್ರೇಮ ಭಾವನೆಯನ್ನು ತಾಳಿ, ನನ್ನನ್ನು ಸಂತೈಸುವಿಯೆಂದು ಭಾವಿಸುವೆ? ಈ ಸಮಯದಲ್ಲಿ ನೀನು ಇನ್ನಾರನ್ನು ಪ್ರೀತಿಸುವಿ? ಯೋಚಿಸು. ನಾನು ಪರ್ಯಾಲೋಚಿಸದೆ ಮಾತನಾಡುತ್ತಿಲ್ಲ. ಬೇಕಾದರೆ ಈ ತರುಣ ತುಂಟರ

ತಂಡದವರನ್ನು ದೂರ ಇರುವಂತೆ ಮಾಡುವೆನು. ನಿನ್ನ ಇಚ್ಛೆ ಏನೆಂಬುವುದನ್ನು ಬೇಗ ಹೇಳು. ಕ್ರಾವಲೋವ್ ರಾಜಕುಮಾರನನ್ನು ಮೊದಲು ವಿಚಾರಿಸಿಕೊಳ್ಳಲೇ ?'' ಎಂದು ಕೇಳಿದ.

ರಾಜಕುಮಾರನ ಹೆಸರೆಂದ ಕೂಡಲೇ ಇವೆತ್‌ಳು ಮುಖವರಳಿಸಿ "ಇದೇನು ನಿಮ್ಮ ಯೋಚನೆ ? ಅವನು ಚಿತ್ರದ ಗೊಂಬೆಯಂತೆ ನಿಂತಲ್ಲಿ ಸುಮ್ಮನೇ ಇದ್ದು ಬಿಡುವನು. ಅವನಿಂದ ನಿಮಗೇನು ತೊಂದರೆಯಾಗಿದೆ? ಪಾಪ ರಾಜಕುಮಾರನನ್ನು ಹಿಂಸಿಸಬೇಡಿ"

"ಅವನು ಬೇಡ. ಆ ಜಮೀನ್‌ದಾರನಾದ ಶ್ರೀಮಂತ ಪೀರೀಯುವರನ್ನು ವಿಚಾರಿಸಿಕೊಳ್ಳಲೇ ?"

ಇವೆತ್‌ಳು ನಗತೊಡಗಿದಳು. "ಅವನೊಬ್ಬ ಮೂರ್ಖ. ನಾನು ದಿನವೂ ವಿಧವಿಧವಾದ ಹೆಸರಿಟ್ಟು ಹಾಸ್ಯ ಮಾಡುವುದನ್ನು ನೀವು ನೋಡುವುದಿಲ್ಲವೇನು ? ಇಂಥವನನ್ನು ಪ್ರೀತಿಸಿ ನಾನು ಮಾಡುವುದಾದರೂ ಏನು ?" ಎಂದು ಅವನ ಬಗ್ಗೆ ಅಸಂತೋಷವನ್ನು ವ್ಯಕ್ತ ಮಾಡಿದಳು.

"ಅಂದಲ್ಲಿ ಅವನೂ ದೂರ ಸರಿಯಲಿ. ನಿಮ್ಮ ತಾಯಿಯು ಬಹು ಅಕ್ಕರೆಯಿಂದ ಆರಿಸಿದ ಕೆವೇಲಿಯರ್ ವೆಲಿರೀಲೇ ಇರುವನು" ಎಂದು ಸರ್ ವೀನ್ನೀಯು ಸೂಚಿಸಿದ.

"ಅವನೇ, ಅಳುಮುಖದ ಶನಿಗೇಡಿ. ಅವನು ಯಾವಾಗಲೂ ಸ್ಮಶಾನ ಯಾತ್ರೆಗೆ ಹೊರಟು ನಿಂತಿರುವ ಮೆರವಣಿಗೆಗಳಿಗೆ ಹೋಗಲು ತಕ್ಕವನೇ ಹೊರತು, ಅವನಿಗೆ ಕಾಮ ವ್ಯವಹಾರಗಳಿಗೆಲ್ಲಿರುವುದು ವೇಳೆ ? ಅವನನ್ನು ನೋಡಿದಾಗಲೆಲ್ಲ ನನಗೆ ಸಾವು ಶೀರ ಹತ್ತಿರ ಬಂದಂತಾಗುವುದು. ಅವನೆಂದರೆ ನನಗೇಕೋ ಇಲ್ಲದ ಭಯ" ಎಂದಳು ಇವೆತ್.

"ಇನ್ನುಳಿದವರೆಂದರೆ ನನ್ನ ಮಿತ್ರರಾದ ಸಾವಾಲ್‌ನು"

"ಅವರೇ ! ಬಹು ಶಕ್ತಿವಂತರು. ಅವರ ಬಲಯುತ ಬಾಹುಗಳಲ್ಲಿ ನಾನೊಂದು ಪಾರಿವಾಳದಂತೆ ಸಿಕ್ಕಿ ನರಳಬೇಕಾದೀತು ಅಯ್ಯೋ ಬೇಡವೇ ಬೇಡ."

"ಅಂದಲ್ಲಿ, ಇವೆತ್ ! ಇನ್ನು ಉಳಿದವನು ನಾನೊಬ್ಬನೇ. ನನ್ನ ಬಗ್ಗೆ ಯಾವ ಅಭಿಪ್ರಾಯ ತಾಳಿರುವೆ ? ನಿನ್ನ ಅಭಿಪ್ರಾಯವನ್ನೂ ವ್ಯಕ್ತ

ಮಾಡದೇ ನೀನು ಸುಮ್ಮನಿರುವುದನ್ನು ನೋಡಿದರೆ........''

" ಏನು ಏನೆಂದಿರಿ ? ನಿಮ್ಮಲ್ಲಿ ನನಗೆ ಪ್ರೇಮವೇ ? ಇಲ್ಲ. ಆದರೆ ನೀವೆಂದರೆ ನನಗೆ ಅಭಿಮಾನ: ವಿಶ್ವಾಸ ಆಗಲಿ ನಿಮ್ಮನ್ನು ಪ್ರೀತಿಸಲಾರೆ. ಆದರೂ ನಿಲ್ಲಿ.......ನಿಲ್ಲಿ ಕೊಂಚ.......ಇಲ್ಲ,ಇಲ್ಲ ನಿಮ್ಮಲ್ಲಿ ನನಗೆ ಪ್ರೇಮ ವಿದೆಯೆಂದು ಹೇಳಬಹುದು. ಈ ಎಲ್ಲರಿಗಿಂತಲೂ ನನ್ನ ಹೃದಯದ ಹತ್ತಿರ ಬರಲು ಶಕ್ತಿ ಉಳ್ಳವರು ನೀವೊಬ್ಬರೇ. ನೀವು ಸಹನೆಯಿಂದ ಆ ಸಮಯ ಕ್ಕಾಗಿ ಕಾಯಬೇಕು. ನನ್ನ ಪ್ರೀತಿಯ ಸಂಪಾದನೆಗೆ ನೀವು ಹೆಚ್ಚು ಅಕ್ಕರೆ ಯಿಂದ, ಮಮತೆಯಿಂದ ದುಡಿಯಬೇಕು. ಉತ್ತೀರ್ಣರಾದರೆ ನಾನು ನಿಮ್ಮ ವಶಳಾಗಬಹುದು, ನಿಮ್ಮ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯಬಹುದು.''

" ಇವೆತ್! ನೀನು ನನ್ನವಳಾಗುವಿಯೆಂದು ತಿಳಿದ ಮೇಲೆ ನಾನು ನಿನಗೆ ತಕ್ಕವನಂತೆ ವರ್ತಿಸುವುದಿಲ್ಲವೆಂದು ನಿನ್ನ ಭಾವನೆಯೆ ? ನಿನ್ನನ್ನು ವಶಮಾಡಿಕೊಳ್ಳುವುದರ ಮುನ್ನ ನನ್ನನ್ನು ಈ ಬಗೆಯ ಪರೀಕ್ಷೆಗೆ ಗುರಿ ಮಾಡಬೇಡ. ನೀನು ನನ್ನವಳಾಗು ಅನಂತರ ನಾನು ನಿನ್ನ ಪರಮ ಭಕ್ತ: ಸೇವಕ.

" ಏನೆಂದಿರಿ ? "

" ನೀನು ನನ್ನನ್ನು ಪ್ರೀತಿಸುವಿಯೆಂದು ನನಗೆ ಮೊದಲು ತಿಳಿದರೆ ನಾನು ಎಂತಹ ಪರೀಕ್ಷೆಗಾದರೂ ಸಿದ್ಧನಿರುವೆನು "

" ನಿಮ್ಮ ಮನಸ್ಸಿನಲ್ಲಿ ಹಾಗೆಂದು ಭಾವಿಸಿ ನನ್ನ ಸೇವೆಯಲ್ಲಿ ನಿರತ ರಾಗಿರಿ, ನನ್ನ ಪ್ರೀತಿವಿಶ್ವಾಸಗಳನ್ನು ಪಡೆಯಲು ನಾನು ನಿಯಮಿಸುವ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕು. "

" ನಾನು ಪರೀಕ್ಷೆಗೆ ಕೂಡಲು ಸಿದ್ಧನೇ. ಆದರೆ ಈ ಪ್ರೇಮ ಪರೀಕ್ಷೆ ಯಲ್ಲಿ ನಿನ್ನ ಸಹಕಾರವೂ ಬೇಕಲ್ಲ ? ಹೇಗೆ ? ''

" ನನಗೆ ಈ ಚರ್ಚೆ ಈಗ ಮುಂದರಿಸಲು ಇಷ್ಟವಿಲ್ಲ. " ಎಂದು ಇವೆತ್ ಚರ್ಚೆ ಮುಗಿಸಿದಳು.

ಸೂರ್ಯನು ಅಸ್ತಮಿಸಿದ್ದ. ಪಶ್ಚಿಮ ನಭೋಮಂಡಲವು ಕೆಂಪು ವರ್ಣತಾಳಿತ್ತು. ಆ ಗಗನದ ಕೆಂಪು ರಕ್ತವರ್ಣದಲ್ಲಿ ನದಿಯ ತಿಳಿನೀರು ಸಹಿತ ಕೆಂಪು ವರ್ಣತಾಳಿದ್ದಿತು. ಅದರ ನೆರಳಿನಲ್ಲಿ ಕಾಣುವ ಆಗಸ,ನೆಲ,

ಮನೆಗಳೆಲ್ಲವೂ ಕೆಂಪಾಗಿಯೇ ಕಂಡು ಬಂದವು. ಇವೆತ್‌ಳ ತಾಯಿ ಧರಿಸಿದ ಆ ರೋಜಾ ಹೂ ಸಹಿತ ಕೆಂಪು ವರ್ಣವನ್ನು ತಾಳಿತ್ತು.

ತನ್ನ ತಾಯಿಯನ್ನು ಇವೆತ್‌ಳು ಏಕೋ ಒಂದೇ ಸವನೆ ನೋಡುತ್ತಿದ್ದಳು.ಅವಳು ತನ್ನೊಂದು ಸುಂದರವಾದ ಕೈಯನ್ನು ಸಾವಾಲನ ಭುಜದ ಮೇಲಿರಿಸಿದ್ದಳು. ಮಗಳು ಬಂದಳೆಂದು ತಿಳಿದ ಕೂಡಲೇ ಆ ಕೈದೂರವಾಯಿತು. ಇದನ್ನೆಲ್ಲ ನೋಡುತ್ತಿದ್ದ ಸರ್‌ವೀನ್ನೀಯು

" ನಿನಗೆ ಬೇಕೆನಿಸಿದರೆ, ಊಟವಾದ ನಂತರ ಆ ಪ್ರದೇಶದಲ್ಲಿ ನಾವಿಬ್ಬರೇ ವಿಹರಿಸಿ ಬರೋಣ " ಎಂದು ಸೂಚಿಸಿದ.

" ಒಳ್ಳೇಯೋಚನೆ. ಬಲು ಸಂತೋಷದ ಸೂಚನೆ. ನಾವಿಬ್ಬರೇ ಹೋಗೋಣ. ಮತ್ತಾರೂ ಬೇಡ. ಅಲ್ಲವೆ ? "

" ಆಗಬಹದು. ನಾವಿಬ್ಬರೇ, ಮತ್ತಾರೂ ಬೇಡ."

ಅವಳ ಮನಸ್ಸಿನ ಆವೇಶ ಸಂತೋಷ, ಹುಮ್ಮಸ್ಸು, ಎಂತಹದೆಂಬುದನ್ನು ಅರಿಯಲು ಆಗ ಸರ್‌ವೀನ್ನೀಗೆ ಮಾತ್ರ ಶಕ್ಯವಾಗಿತ್ತು ಅವಳ ಹೃದಯದಲ್ಲಾಗುವ, ಆನಂದ ಲಹರಿಯ ಆ ವೇಗ ಅವನಿಗೊಬ್ಬನಿಗೇ ಅರ್ಥವಾಗುತ್ತಿತ್ತು. ಶಾಂತಚಿತ್ತದಿಂದ ಅವಳು ಕಣ್ಮುಚ್ಚಿ ಯೋಚಿಸುವ ಆಭಂಗಿ ಬಹು ಮನೋಹರವಾಗಿತ್ತು. ಆಗ ಅವಳ ಚೆಲುವು ಇಮ್ಮಡಿ ಯಾಗಿತ್ತು.

ಆ ಸಂಜೆಗೆಂಪು ಮಾಯವಾಗತೊಡಗಿದಂತೆಲ್ಲ ಮೆಲ್ಲನೆಕತ್ತಲೂ ಹಬ್ಬಿಕೊಂಡಿತು. ಸಾವಾಲ್‌ನು ಸರ್‌ವೀನ್ನೀಯ ಹತ್ತಿರ ಬಂದು " ಇಲ್ಲಿ ನೀವು ಇನ್ನೂ ಹೆಚ್ಚು ಹೊತ್ತು ಇರುವಿರೇನು ?" ಎಂದು ಕೇಳಿದ.

ಆಗ ಓಬಾರ್ದಿಯು " ನಮ್ಮ ಮನಸ್ಸಿಗೆ ಆನಂದ ವೆನಿಸುವವರೆಗೆ ಇಲ್ಲಿರಬೇಕೆಂದು ನಿಶ್ಚಯಿಸಿರುವೆನು.? ಊಟದ ಏರ್ಪಾಟೂ ಇಲ್ಲಿಯೇ ಆಗುವದು'' ಎಂದಳು.

ಕತ್ತಲಾದುದರಿಂದ ಆಳುಗಳು ದೀಪವನ್ನು ತಂದಿರಿಸಿದರು. ವಿಶಾಲವಾದ ಆ ಬಯಲಿನಲ್ಲಿ ಕೆಲವರೇ ಟೇಬಲದಮೇಲೆ ಊಟಕ್ಕೆ ಕುಳಿತಿರುವುದು ಬಹು ವಿಚಿತ್ರವೆನಿಸಿತು. ದೀಪದ ಹುಳುಗಳು ಪ್ರಕಾಶಯುತವಾದ ದೀಪವನ್ನು ಮುತ್ತಿಡಲು ಬಂದುಬಿಳಿಯ ' ಟೇಬಲಕ್ಲಾತ'ದ ಮೇಲೆ

ಸತ್ತು ಬೀಳುತ್ತಿದ್ದ ಆ ನೋಟ ಬಹು ಮಾರ್ಮಿಕವಾಗಿತ್ತು. ಸಾವು ತೀರ ಹತ್ತಿರದ ಮಾತೆಂದು, ಸುಖಕ್ಕೆಂದು ಆಶೆಯಿಂದ ಬಂದ ಆ ಹುಳಗಳು ದುಃಖಕ್ಕೆ ಈಡಾಗುವ ಈ ದೃಶ್ಯ ಒಂದು ದಿವ್ಯ ಸಂದೇಶವನ್ನು ಸಾರುವುತ್ತಿತ್ತು.

ಊಟ ಮೌನವಾಗಿಯೇ ಮುಂದರಿಯಿತು. ಆ ಹುಳುಗಳು ಸಾವಿನೊಡನೆ ನಾಗಿಸಿದ ಆ ಸರಸ ಇವೆತ್‌ಳ ಹೃದಯವನ್ನು ಕಲಕಿತು. ಊಟದ ನಡುವೆ ದ್ರಾಕ್ಷಾರಸ ಪಾನಿಯವೂ ಹಂಚಲ್ಪಟ್ಟಿತು. ಇವೆತ್‌ಳ ಹತ್ತಿರವೇ ಕುಳಿತಿದ್ದ ಸರ್ವೀನ್ನೀಯು ಅವಳನ್ನು ಎವೆಯಿಕ್ಕದೆ ನೋಡುತ್ತಿದ್ದ. ಅವಳ ಈ ಆಕಸ್ಮಿಕ ಮೌನ ಅವನಿಗೆ ಅರ್ಥವಾಗಲಿಲ್ಲ. ಇವೆತ್‌ಳ ತಾಯಿಗೆ ಈ ಮೌನ ವ್ರತ ಬೇಸರವಾದಂತೆ ಕಂಡು ಬಂತು. ಊಟವೂ ಬಲು ಬೇಗ ಮುಗಿದುದು ಅವಳಿಗೆ ಆಶ್ಚರ್ಯವೆನಿಸಿರಬೇಕು. ಊಟ ಮುಗಿದೊಡನೇ ಇವೆತ್‌ಳು "ನಾವಿಬ್ಬರೂ ಅಲ್ಲಿ ಕಾಣುವ ನಡುಗಡ್ಡೆಗೆ ಹೋಗೋಣವೇ ?" ಎಂದು ಸರ್ವೀನ್ನೀಗೆ ಸೂಚಿಸಿದಳು.

ಇದನ್ನು ಕೇಳಿ ಅವಳ ತಾಯಿಯು ಎಚ್ಚರಿಸುವ ದನಿಯಲ್ಲಿ "ಬಹಳ ಹೊತ್ತು ಹೋಗಬೇಡಿ. ಬೇಗ ಬಂದುಬಿಡಿ. ನಾವೂ ನದಿಯ ದಂಡೆಯವರೆಗೆ ಬರುತ್ತೇವೆ." ಎಂದ ನಂತರ ಎಲ್ಲರೂ ನದಿಯ ಕಡೆ ನಡೆದರು. ಸಾವಾಲ್ ಮತ್ತು ಓಬಾರ್ದಿಯವರು ಏನೇನೋ ಕಿವಿಮಾತಿನಲ್ಲಿ ಪಿಸುಗುಟ್ಟುವುದು ಈ ಯುವಕರಿಗೆ ಕೇಳಿಬರುತ್ತಿತ್ತು. ಎಲ್ಲವೂ ಕಗ್ಗತ್ತಲು. ಆದರೆ ಗಗನದಲ್ಲಿ ನಕ್ಷತ್ರಗಳು ಹೆಚ್ಚು ಪ್ರಕಾಶಮಾನವಾಗಿದ್ದುದರಿಂದ ನದಿಯ ದಡವನ್ನು ಬೇಗ ಸೇರಿದರು.

ಕಪ್ಪೆಗಳ ಬೆಕಬೆಕ ಸಪ್ಪಳವೂ, ಬೆಂಕಿಹುಳದ ಸೊಗಸಾದ ನೋಟವೂ ಮನಸ್ಸಿಗೆ ಆನಂದವನ್ನುಂಟು ಮಾಡುತ್ತಿದ್ದವು.

ನದಿಯನ್ನು ಸಮೀಪಿಸಿದ ಕೂಡಲೇ ಇವೆತ್‌ಳು ಹಿಂದೆನೋಡಿ "ಇದೇನು ಹಿಂದೆ ಯಾರೂ ಇಲ್ಲವಲ್ಲ ? ಅವರೆಲ್ಲ ಎಲ್ಲಿಗೆ ಹೋದರು ? " ಎಂದು ಹೇಳಿ ಎತ್ತಿದ ಸ್ವರದಲ್ಲಿ "ಅಮ್ಮಾ !" ಎಂದು ಕೂಗಿದಳು. ಮಾರುತ್ತರ ಬರಲೇ ಇಲ್ಲ. ಇವೆತ್‌ಳಿಗೆ ಆಶ್ಚರ್ಯವೆನಿಸಿತು. "ಹೀಗೇಕಾಯಿತು ? ಈಗ ತಾನೇ ಅವರಿಬ್ಬರ ಪಿಸುಮಾತು ಕೇಳಿಸುತ್ತಿತ್ತು. ಅವರು ಹತ್ತಿರವೇ ಇರಬೇಕಲ್ಲವೇ ?" ಎಂದು ಕೇಳಿದಳು.

ಇವೆತ್‌ಳ ಮಾತನ್ನು ಲಕ್ಷಿಸದೇ ಸರ್‌ವೀನ್ನೀಯು "ಅವರು ಹಿಂತಿರುಗಿ ಮನೆಗೆ ಹೋಗಿರಬೇಕು. ನಿಮ್ಮ ತಾಯಿಗೆ ಥಂಡಿ ವ್ಯಾಗಾಗುವದಿಲ್ಲ. ನಾವು ಮುಂದೆ ಹೋಗುವ" ಎಂದು ಅವಳೊಂದಿಗೆ ಮುಂದೆ ನಡೆದ.

ಸ್ವಲ್ಪ ದೂರದಲ್ಲಿ ದೀಪದ ಬೆಳಕು ಕಂಡು ಬಂತು. ಅದು ಮೀನುಗಾರನಾದ ಮಾರ್ಟಿನನ ಅಂಗಡಿ. ಅದನ್ನು ಸಮೀಪಿಸುವ ಹೊತ್ತಿಗೆ ಒಳಗಿನಿಂದೊಬ್ಬ ನಾವಿಕ ಬಂದ. ಆಚೆಯ ದಡ ಸೇರಲು ಅವನೊಂದಿಗೆ ಮಾತು ಮುಗಿಸಿ ನಾವೆಯಲ್ಲಿ ಕುಳಿತರು.

ನೀರಿನಲ್ಲಿ ನಾವೆ ಮೆಲ್ಲನೆ ಸರಿಯುತ್ತಿರುವಾಗ ನದಿಯ ನೀರಿನಲ್ಲಿ ಕಾಣುವ ನಕ್ಷತ್ರಗಳು ಕದಡಿ ಹೋದವು. ಆಚೆ ದಂಡೆಯನ್ನು ಸೇರಿ ನಾವೆಯನ್ನಿಳಿದು ಆ ಇಬ್ಬರೂ ಗಿಡಗಳ ನೆರಳಿನಲ್ಲಿ ಮಾಯವಾದರು. ಆಗ ಎಲ್ಲೆಲ್ಲಿಯೂ ತನುವೇ. ಗಾಳಿಯು ತಂಪು, ಸುತ್ತು ನೀರಿನ ತಂಪು, ಗಿಡಗಳಿಂದ ಬರುವ ಸುವಾಸನೆಯು ತಂಪು, ಎಲ್ಲವೂ ಮನೋಹರವಾಗಿತ್ತು. ಎಲ್ಲಿಯೋ ದೂರದಲ್ಲಿ ಒಂದು ಮನೆಯಿಂದ ಪಿಯಾನೋದ ಮೇಲೆ ಚಿರಪರಿಚಿತವಾದ ಗೀತೆಯ ಗಾನ ಕೇಳಿ ಬರುತ್ತಿತ್ತು ಮೇಲೆ ಎಳೆ ಬೆಳುದಿಂಗಳು.

ಸರ್‌ವೀನ್ನೀಯು ಇವೆತ್‌ಳ ಒಂದು ಕೈಯ ಮೇಲ್ಭಾಗವನ್ನು ಮೆಲ್ಲಗೆ ಸವರುತ್ತ, ಅವಳ ಸೊಂಟದತ್ತ ಮತ್ತೊಂದು ಕೈಯನ್ನು ಚಾಚಿ ಅವಳನ್ನು ಹತ್ತಿರ ಎಳೆದುಕೊಂಡು "ಏನು ನಿನ್ನ ಯೋಚನೆ?" ಎಂದು ಕೇಳಿದ.

"ಏನೂ ಇಲ್ಲ, ನನಗೆ ಈ ಸನ್ನಿವೇಶ ಬಹಳ ಸುಖವನ್ನುಂಟು ಮಾಡಿದೆ ಅಷ್ಟೇ!"

"ನೀನು ನನ್ನನ್ನು ಪ್ರೀತಿಸುವುದಿಲ್ಲವೇ ಇವೆತ್?"

"ನಿಮ್ಮನ್ನು ಪ್ರೀತಿಸುವೆನು. ಹೆಚ್ಚಾಗಿ ಪ್ರೀತಿಸುವೆನು. ಆದರೆ ಈ ಸುಂದರ ಪ್ರದೇಶದಲ್ಲಿ ನಿಮ್ಮ ಈ ಕಾಮುಕ ಅತಿರೇಕದ ಚೇಷ್ಟೆಗಳಾವೂ ನನಗೆ ಬೇಡವಾಗಿವೆ" ಎಂದಳು.

ಆದರೂ ಸರ್‌ವೀನ್ನೀಯು ತನ್ನ ಹಿಡಿತವನ್ನು ಸಡಿಲಿಸಲಿಲ್ಲ. ಅವಳೆಷ್ಟು ಯತ್ನಿಸಿದರೂ ದೂರ ಸರಿಯಗೊಡದೆ ಮತ್ತಷ್ಟು ತನ್ನ ಆಲಿಂಗನವನ್ನು ಬಲಪಡಿಸಿಕೊಂಡ. ಅವಳ ಮೈಯ ಸುಂದರ ಸುಖಸ್ಪರ್ಶ ಬಲು ಸುಖದಾಯಕವಾಗಿತ್ತು. ಅವನು ಪ್ರಮತ್ತನಾಗಿ "ಇವೆತ್" ಎಂದುಸುರಿದ.

" ಏನು "

" ನಿನ್ನನ್ನು ಅತಿ ಆಶೆಯಿಂದ ಪ್ರೀತಿಸುತ್ತಿರುವೆ, ಇವೆತ್ "

" ಆದರೆ ಈ ಆಶೆ ಕ್ಷಣಿಕವೆಂವೆನಿಸುತ್ತದೆ. ನಿಮ್ಮ ಈ ಪ್ರೇಮದಲ್ಲಿ ಆಡಂಬರವೇ ಹೆಚ್ಚೆಂದು ನನಗೆ ಎನಿಸುತ್ತದೆ. ನೀವು ನನ್ನನ್ನು ಆತ್ಮೀಯ ವಾಗಿ ಪ್ರೀತಿಸುವಿರೆಂದು ನಾನು ಭಾವಿಸಲಾರೆ"

" ನಿನ್ನ ಊಹೆ ತಪ್ಪು, ಇವೆತ್. ನಿನ್ನನ್ನು ಬಹು ದಿನಗಳಿಂದ ನಾನು ಪ್ರೀತಿಸುತ್ತ ಬಂದಿರುವೆನು "

ಇವೆತ್‌ಳು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲು ಮಾಡಿದ ಪ್ರಯತ್ನ ಗಳೆಲ್ಲವೂ ವಿಫಲವಾದವು. ಅವನು ತನ್ನ ಹಿಡಿತವನ್ನು ಸಡಲಿಸಲಿಲ್ಲವಾದುದ ರಿಂದ ಅವರು ಹೆಜ್ಜೆಯನ್ನು ಭಾರವಾಗಿ ಹಾಕತೊಡಗಿದರು. ಕುಡುಕರಂತೆ ಅತ್ತಿಂದಿತ್ತ ಇತ್ತಿಂದತ್ತ ಸರಿದಾಡುತ್ತ ಮೆಲ್ಲನೆ ಇಬ್ಬರೂ ಮುಂದೆ ಸಾಗಿದರು.

ಸರ್‌ವೀನ್ಸ್ನೀಗೆ ಮುಂದೇನು ಮಾತಾಡಬೇಕೆಂಬುದು ತೋಚದಂತಾ ಯಿತು. ತನ್ನ ಜತೆಯಲ್ಲಿರುವವಳು ಇನ್ನೂ ಪ್ರೇಮ, ಕಾಮ ವ್ಯವಹಾರ ಗಳನ್ನು ತಿಳಿಯದ ಮುಗುಧೆ ಯಾದುದರಿಂದ ಅವಳೊಂದಿಗೆ ಹೇಗೆ ವರ್ತಿಸ ಬೇಕೆಂಬುದು ಸಮಸ್ಯೆಯಾಗಿಯೇ ಪರಿಣಮಿಸಿತು. ವಿನಯದ ಮೆಲು ದನಿ ಯಲ್ಲಿ " ಇವೆತ್, ಮಾತನಾಡು. ಏತಕ್ಕೆ ಈ ಮೌನ ?" ಎಂದು ಅನೇಕ ಸಲ ಕಾತರದಸ್ವರದಲ್ಲಿ ಬೇಡುತ್ತಿದ್ದ.

ಆವನಿಗೆ ಹೆಚ್ಚು ಸಮಯ ಸುಮ್ಮನಿರಲಾಗಲಿಲ್ಲ. ಧೈರ್ಯದಿಂದ ಅವಳ ಗಲ್ಲಗಳನ್ನು ಮೆಲ್ಲನೆ ಚುಂಬಿಸಿದ.

ಗಲ್ಲಗಳ ಚುಂಬನದಿಂದ ಸ್ತಂಭಿತಳಾದ ಇವೆತ್ ತನ್ನ ಮುಖವನ್ನು ತಿರುವಿ, ಬೇಸರದ ಸ್ವರದಲ್ಲಿ " ಏನಿದು ಮೂರ್ಖತನ? ನನ್ನನ್ನು ಈ ರೀತಿ ಪರಿಭವಿಸುವುದು ನಿಮಗೆ ನ್ಯಾಯವಲ್ಲ" ಎಂದಳು.

ಅವಳ ಮಾತಿನ ಸರಣಿ ಮನಸ್ಸಿನ ಭಾವನೆಗಳನ್ನು ವ್ಯಕ್ತಮಾಡುವಂ ತಹವುಗಳಾಗಿದ್ದಿಲ್ಲ. ಆದರೆ ಅವಳು ಹೆಚ್ಚು ಕೋಪಗೊಂಡಿಲ್ಲವೆಂಬುದು ತಿಳಿದು ಬಂದುದರಿಂದ, ಪ್ರಿಯನು ಪ್ರೇಯಸಿಯನ್ನು ಚುಂಬಿಸಲು ಅತಿ ಸುಖ ಮುಖ್ಯ ಭಾಗವನ್ನು–ಗಲ್ಲಗಳ ಹಿಂದಿನ ಭಾಗ–ಚುಂಬಿಸಿದ. ಸುವ

ರ್ಣದಂತೆ ಹೊಳೆಯುತ್ತಿದ್ದ ಮುಂಗುರುಳಿನಿಂದ ಕಾದಿರಿಸಲ್ಪಟ್ಟ ಈ ಭಾಗದ ಚುಂಬನದಿಂದ ಇವೆತ್‌ಳು ಹೆಚ್ಚು ಬೇಸರಗೊಂಡಂತೆ ಕಂಡು ಬಂತು. ಅವಳು ಹೊಯ್ದಾಡಿದರೂ ಅವನ ಹಿಡಿತದಿಂದ ಬಿಡಿಸಿಕೊಳ್ಳಲು ಶಕ್ತಳಾಗಲಿಲ್ಲ. ಕೊನೆಗೆ ಅವನು ಅವಳ ಮುಖವು ತನ್ನ ಕಡೆ ತಿರುಗಿಸಿಕೊಂಡು ಅವಳ ತುಟಿಗಳನ್ನು ಮುದ್ದಿಟ್ಟ.

ಈ ಅವಸ್ಥೆಯಲ್ಲಿ ಅವನ ಹಿಡಿತ ಕೊಂಚ ಸಡಿಲವಾದುರಿಂದ, ಸಮಯವರಿತು ಅವಳು ಅವನ ಹಿಡಿತದಿಂದ ತಪ್ಪಿಸಿಕೊಂಡು ದೂರ ಸರಿದು, ಕತ್ತಲಲ್ಲಿ ಓಡಹತ್ತಿದಳು.

ಸರ್‌ವೀನ್ನೀಗೆ ಅವಳ ಈ ವರ್ತನೆ ಆಶ್ಚರ್ಯವೆನಿಸಿತು. ಹೌಹಾರಿ ಸುಮ್ಮನೆ ನಿಂತು ಬಿಟ್ಟ. ಅವಳು ಬಹು ದೂರ ಹೋದುದನ್ನು ಕಂಡು ಅವಳ ಸುಳಿವನ್ನು ಕಂಡು ಹಿಡಿಯದೆ, 'ಇವೆತ್, ಇವೆತ್, ಇವೆತ್' ಎಂದು ಒದರಿದ. ಎಷ್ಟು ಕೂಗಿದರೂ ಅವಳಿಂದ ಮಾರುತ್ತರವೇ ಬರಲಿಲ್ಲ.

ಆಗ ಅವಳ ಇರವಿಕೆಯನ್ನು ಕಂಡು ಹಿಡಿಯಲು ಮುಂದೆ ನುಗ್ಗಿದ. ಅವಳುಟ್ಟ ಬಿಳಿಯ ಪೋಷಾಕಿನ ಛಾಯೆ ಎಲ್ಲಿಯಾದರೂ ಕಂಡು ಬರುವುದೇ ಎಂದು ಕಣ್ಣು ಪಿಳಿಕಿಸಿ ನೋಡಿದ. ಕತ್ತಲಲ್ಲಿ ಏನೂ ತಿಳಿಯುಲಿಲ್ಲ. ಅವಳ ಹೆಸರೆನ್ನೆತ್ತಿಕೊಂಡು ಸುಮ್ಮನೇ ಎಷ್ಟು ಸಲ ಕೂಗಿದರೂ ಯಾವ ಮಾರುತ್ತರವೂ ಕೇಳಬರಲಿಲ್ಲ. ಅವಳ ಇರುವಿಕೆಯನ್ನು ತಿಳಿಯದೆ ಸರ್‌ವೀನ್ನೀಯು ಗಾಬರಿಗೊಂಡ. ಎಲ್ಲವೂ ಶಾಂತಮಯವಾಗಿತ್ತು. ಸ್ವಲ್ಪ ಮೆಲ್ಲನೆ ಬೀಸುವ ಗಾಳಿಗೆ ಅಲುಗಾಡಲೋ ಬೇಡವೋ ಎಂದೆನ್ನುವ ಗಿಡದೆಲೆಗಳ ಸಪ್ಪಳ, ದೂರದಲ್ಲಿ ನೀರಿನ ಬಳಿ ಇದ್ದ ಕಪ್ಪೆಗಳ ಬೆಕ ಬೆಕ ಸದ್ದು, ಮಾತ್ರ ದೂರದಲ್ಲಿ ಕೇಳಿಬರುತ್ತಿದ್ದವು. ನದಿಯ ದಡದಲ್ಲಿ ಹರಡಿಕೊಂಡಿದ್ದ ಗಿಡ ಬಳ್ಳಿಗಳಲ್ಲೆಲ್ಲ ಹುಡುಕಿದ. ಸುತ್ತಿ ಸುತ್ತಿ ಬೇಸತ್ತು ಮೀನಗಾರನ ಮನೆ ಮುಂದೆ ಬಂದು ನಿಂತ. ಹೊರಗಿನಿಂದಲೇ "ಇವೆತ್ ನೀನೆಲ್ಲಿ ಇರುವೆ? ಹುಡುಕಿ ಹುಡುಕಿ ಬೇಸತ್ತಿರುವೆನು. ನನ್ನನ್ನು ಕಾಡುವುದು ಸರಿಯಲ್ಲ. ಹೀಗೆ ಕತ್ತಲಲ್ಲಿ ಒಬ್ಬಳೇ ಮಾಯವಾಗುವುದು ನ್ಯಾಯವಲ್ಲ. ಎಲ್ಲಿರುವೆ? ಮಾತನಾಡು" ಎಂದು ಕೂಗಿಕೊಂಡ.

ದೂರದಲ್ಲಿ ಮನೆಯ ಗಡಿಯಾರದ ಟಿಕ ಟಿಕ ಸಪ್ಪಳ ಮಾತ್ರ ಕೇಳು

ತ್ತಿತ್ತು. ಅದರ ನೆರವಿನಿಂದ ಸಮಯ ಹನ್ನೆರಡೆಂದು ತಿಳಿದು ಬಂತು. ಎರಡು ಗಂಟೆಗಳ ವರೆಗೆ ಅವಳನ್ನು ಹುಡುಕಿದೆನೆಂದು ಅವನು ತಿಳಿದು ತೀರ ಬೇಸತ್ತ. ಅವಳು ಮನೆಗೆ ಹೋಗಿರಬಹುದೆಂದು ನಿರ್ಧರಿಸಿ ಓಬಾರ್ದಿಯ ಮನೆಯನ್ನು ಸಮೀಪಿಸಿದ. ಮನೆಯ ಕಾವಲುಗಾರನನ್ನು ವಿಚಾರಿಸಿ ಇವೆತ್‌ಳು ಮನೆಗೆ ಬಂದು ಬಹಳ ಸಮಯವಾಯಿತೆಂದು ತಿಳಿದು ಸಮಾಧಾನ ಹೊಂದಿದ. ಬೇಗ ತನ್ನ ಕೋಣೆಯನ್ನು ಸೇರಿ ಅಂದು ನಡೆದುದೆಲ್ಲವನ್ನೂ ನೆನೆಯುತ್ತ ಮಲಗಿದ. ನಿದ್ದೆ ಬರಲಿಲ್ಲ. ಇವೆತ್‌ಳೊಂದಿಗೆ ತಾನು ನಡೆಸಿದ ಪ್ರಸಂಗ, ಕದ್ದು ಮುದ್ದಿಸಿದ ಆ ಚುಂಬನದ ಸುಖ, ಅವನಿಗೆ ಸುಖ ನಿದ್ರೆಯನ್ನು ತರಬಹುದಾಗಿತ್ತು. ಆದರೆ ಚಂಚಲಗೊಂಡ ಅವನಿಗೆ ಶಾಂತಿ ಇರಲಿಲ್ಲ. ದುಗುಡದಿಂದ ಅವನು ನಿದ್ದೆ ಬಾರದೆ ಹಾಸಿಗೆಯಲ್ಲಿ ಹೊರಳಾಡಿದ. ಮುಂದೆ ಎರಡು ಗಂಟೆಯಾದರೂ ನಿದ್ದೆ ಬರಲಿಲ್ಲ. ಮುಚ್ಚಿದ ಕಿಟಕಿಗಳನ್ನು ತೆಗೆದು ನೋಡಲು ಮನೆಯ ತೋಟದಲ್ಲಿ ಯಾರೋ ಸಿಗರೇಟನ್ನು ಸೇದುತ್ತಿರುವ ಬೆಳಕು ಕಂಡು ಬಂತು. ಅದು ಸಾವಾಲ್‌ನದೇ ಆಗಿರಬೇಕೆಂದು ನೆನೆದು " ಸಾವಾಲ್ " ಎಂದು ಕೂಗಿದ.

" ಯಾರು ನೀನೇ, ಸರ್‌ವೀನ್ನೀಯೋ ?" ಎಂಬ ಮಾರುತ್ತರವನ್ನು ಬಂತು.

" ಬಂದೆ ನಿಲ್ಲು; ಮಾಳಿಗೆ ಇಳಿದು ಬರುವೆನು." ಎಂದು ಬೇಗ ಎದ್ದು ಅರಿವೆ ಹಾಕಿಕೊಂಡು ತೋಟದಲ್ಲಿ ಕಾದಿದ್ದ ಮಿತ್ರನನ್ನು ಕೂಡಿಕೊಂಡ. ಉಕ್ಕಿನ ಕುರ್ಚಿಯ ಮೇಲೆ ಕುಳಿತುಕೊಂಡ ಸಾವಾಲ್‌ನನ್ನು ಕುರಿತು, " ಈ ಹೊತ್ತಿನಲ್ಲಿ ಇಲ್ಲೇನು ಮಾಡುತ್ತಿರುವೆ?" ಎಂದು ಕೇಳಿದ.

ಅವನು ನಗುತ್ತ" ವಿಶ್ರಾಂತಿ ಪಡೆಯುತ್ತಲಿದ್ದೇನೆ "ಎಂದು ಹೇಳಿದ.

" ನನ್ನ ಅಭಿನಂದನೆಗಳು. ಆದರೆ ಇಂದು ನನ್ನ ಪಾಡು ಏನೆಂದು ಹೇಳಲಿ? ನನ್ನ ಯತ್ನವೆಲ್ಲವೂ ವಿಫಲವಾಯಿತು.''

"ಅಂದರೆ......''

" ಅಂದರೇನು ಗಿಂದರೇನು ? ಇವೆತ್‌ಳು ತಾಯಿಯಷ್ಟು ಸುಲಭ ಸಾಧ್ಯಳಲ್ಲ.''

" ಇರಲಿ. ಏನು ನಡೆಯಿತೆಂಬುದನ್ನು ವಿವರಿಸಿ ಹೇಳು "

ನಡೆದ ವಿಷಯುವನ್ನು ಹೇಳಿ "ಅವಳೊಂದು ಒಗಟಿನ ಹೆಣ್ಣು. ಬಹಳ ಹಟದ ಸ್ವಭಾವದವಳು. ಅವಳದು ಇನ್ನೂ ಮುಗ್ಧ ಸ್ವಭಾವ. ನೋಡಲು ಅವಳು ಸರ್ವಸಾಮಾನ್ಯ ಹೆಣ್ಣಿನಂತೆ ಕಂಡು ಬಂದರೂ ಅವಳೊಂದು ವಿಚಿತ್ರ ಸ್ವಭಾವದವಳು. ಪ್ರೇಮ, ಕಾಮ, ಮೋಹ, ಮಮತೆ, ಇವುಗ ಗಳನ್ನು ಅರಿತ ಅನುಭವಿಯಾದರೆ ಸರಿ. ಇವಳು ಏನೂ ಅರಿಯದವಳು. ಅವಳನ್ನು ಅರ್ಥ ಮಾಡಿಕೊಳ್ಳುವುದೇ ಕಷ್ಟವಾಗಿದೆ. ಕ್ರಮೇಣ ಸ್ವಾಧೀನ ಳಾಗುವಳೇ ಆಗಲಿ ಸ್ವಲ್ಪದರಲ್ಲಿಯೇ ಇವಳನ್ನು ಗೆಲ್ಲುವುದು ದುಸ್ತರವೇ ಸರಿ.

ಸಾವಾಲ್‌ನು ಕೂತಲ್ಲಿಂದಲೇ "ಜೋಕೆ ಮಿತ್ರನೇ ಎಚ್ಚರದಿಂದಿರು; ತಿಳಿಯಿತೇ. ಕೊನೆಗೆ ಅವಳನ್ನು ನೀನು ಮದುವೆಯಾಗಬೇಕಾದೀತು. ಸುಮ್ಮನೇ ಆತುರ ಪಡಬೇಡ. ರಾಜ್ಯದ ರಾಣಿಯಾಗುವ ಹೊಳಪು ವೈಭವ ಇವಳ ಚೆಲುವಿನಲ್ಲಿದೆ. ನಿನಗೆ ವಶಳಾದಳೆಂದರೆ ಅವಳನ್ನು ನೀನು ಮದುವೆ ಯಾಗಲೇಬೇಕಾದೀತು."

"ಆ ಆಲೋಚನೆಯೇ ಬೇಡ. ನಾನೇನು ಬಡಪಾಯಿಯೂ ಅಲ್ಲ ಶ್ರೀಮಂತನೂ ಅಲ್ಲ. ನಾನವಳಿಗೆ ನೀಡುವ ಪ್ರೇಮ ಆ ರೀತಿಯದಾಗ ಲಾರದು. ಇರಲಿ ನಿನಗೆ ದಣಿವಾದಂತಿದೆ ? ನಿದ್ದೆ ಬರುವುದೇನು ?"

"ಇಲ್ಲ, ಇಲ್ಲ,"

"ನದಿಯ ತೀರದಲ್ಲಿ ಕೊಂಚ ಸುಳಿದಾಡಿ ಬರೋಣವೇ ?"

"ಆನಂದದಿಂದ ಆಗಬಹುದು."

ಅಮನೆಯ ತೋಟದಿಂದ ಇಬ್ಬರೂ ಹೊರಬಿದ್ದು ನದಿಯಕಡೆ ಹೊರಟರು.

ಆಗ ಮುಂಜಾವಿನ ಸಮಯವಾಗಿತ್ತು. ಜಗತ್ತಿನಲ್ಲೆಲ್ಲ ಶಾಂತಿರಸವೇ ತಾಂಡವವಾಡುತ್ತಿತ್ತು. ಜನರು ಸುಖನಿದ್ರೆಯಲ್ಲಿ ಮಗ್ನರಾಗಿರುವ ಸಮಯ ವದು. ಲೋಕವೇ ಪೂರ್ಣ ಶಾಂತವಾತಾವರಣದಲ್ಲಿ ಮಗ್ನರಾಗಿರುವ ವೇಳೆ. ಜನರು ಸುಖಸ್ವಪ್ನದಲ್ಲಿ ಮಗ್ನರಾಗಿ ತಲ್ಲೀನರಾಗಿರುವ ಸಮಯ. ರಾತ್ರಿಯ ಕ್ರಿಮಿಕೀಟಗಳ ನಿನಾದ, ಕಪ್ಪೆಗಳ ಚೀರಾಟ, ಎಲ್ಲವೂ ಮಾಯ ವಾಗಿದ್ದವು. ಬೆಳಗಿನ ಝೂಾವದಲ್ಲಿ ದನಿಗೈಯುವ ಪಕ್ಷಿ ಕೂಹೂ ಯೆಂದು ಕುಕಿಲುತ್ತಿತ್ತು. ಸರ್‌ವಿನ್ನೀಯು ಭಾವಜೀವಿ. ಇಂತಹ ಸವಿ

ಸಮಯದಿಂದ ಸ್ಫೂರ್ತಿಯನ್ನು ಪಡೆಯುವ ಶಕಿ ಅವನಲ್ಲಿತ್ತು. ಈ ಸಂತೋಷ ವಾತಾವರಣದಲ್ಲಿ ಅವನು 'ಸಾವಾಲ್ ಈ ಸುಕುಮಾರಿಯ ಪ್ರಕರಣ ನನಗೆ ಒಗಟಾಗಿಯೇ ಪರಿಣಮಿಸಿದೆ. ಮಾನವಹೃದಯದಲ್ಲಿಯ ಪ್ರೇಮದ ಕರೆಯನ್ನು ಅರಿಯದ ಸ್ವಭಾವ ಅವಳದು. ಇನ್ನೂ ಅದೇ ವಿಕಸಿಸುವ ಪುಷ್ಪದಂತಿದೆ ಅವಳ ಕೋಮಲ ಹೃದಯ. ಮುಟ್ಟಿದರೆ ಮುದುಡಿಕೊಳ್ಳುವಂತಿದೆ ಅವಳ ಕೋಮಲ ಮನಸ್ಸು. ನಮ್ಮಂಥ ವಿಲಾಸಿಗಳ ಪ್ರೇಮದ ಕರೆಯನ್ನು ತಿಳಿದುಕೊಳ್ಳುವ ಶಕ್ತಿ ಅವಳಲ್ಲಿಲ್ಲ. ಇನ್ನೂ ಕುಚೇಷ್ಟೆಯಲ್ಲಿ, ಎಲ್ಲವನ್ನೂ ವಿನೋದದಲ್ಲಿ ತನ್ನ ಸಮಯವನ್ನು ಕಳೆಯುವ ಸ್ವಭಾವ ಅವಳದಾಗಿದೆ. ಧೃಢಮನಸ್ಸಿನಿಂದ ಜೀವನದ ಸಮಸ್ಯೆಗಳನ್ನು ವಿಚಾರಿಸುವ ಚೇತನ ಅವಳದಲ್ಲ.

" ಆದರೆ, ಅವಳ ಮುಗ್ಧ ರೂಪವನ್ನು ನೋಡಿದಂತೆಲ್ಲ ಎಂಥವನ ಹೃದಯವೂ ಆವೇಶಪೂರಿತವಾಗುತ್ತದೆ. ಆ ಎಳೆಕಣ್ಣುಗಳಲ್ಲಿನ ಕೋಮಲ ಆಕರ್ಷಕ ದೃಷ್ಟಿ, ಅವುಗಳ ಪ್ರಖರತೆ ನನ್ನನ್ನು ಮೈಮರೆಯುವಂತೆ ಮಾಡುತ್ತದೆ. ಅವಳ ಸುಂದರ ಮನಮೋಹಕ ರೂಪ, ನನ್ನನ್ನು ಪೂರ್ಣ ಸೋಲಿಸಿ ಬಿಟ್ಟಿದೆ. ಅವಳನ್ನು ಕೊಂಚ ಸಮಯ ನೋಡದೇ ಹೋದರೆ ನನಗೆ ಹುಚ್ಚು ಹಿಡಿದಂತಾಗುತ್ತದೆ. ಈ ವೇದನೆ, ಆವೇಗ, ಈ ನನ್ನ ಹುಚು ಪ್ರೇಮ ತಿಳಿಯುವ ಶಕ್ತಿ ಅವಳಲ್ಲಿ ಇಲ್ಲ. ಇದೆಲ್ಲವೂ ನನಗೇಕೋ ವಿಚಿತ್ರವೆನಿಸಿದೆ. " ಎಂದು ಹೆಚ್ಚು ಉತ್ಸಾಹದಿಂದ ಸರ್‌ವೀನ್ನೀಯು ಹೇಳುವುದನ್ನು ಸಾವಾಲ್ ಕೇಳುತ್ತ "ನನಗೆ ಈ ಪ್ರೇಮದ ಬಗ್ಗೆ ನೀನು ಆಡುವ ತತ್ವದಮಾತುಗಳೊಂದೂ ರುಚಿಸುವದಿಲ್ಲ, ನನಗೆ ಬೇಕಾದುದು ತಾತ್ಕಾಲಿಕ ಸುಖ. ಅದು ದೊರೆತರೆ ಮುಗಿಯಿತು. " ಎಂದು ದನಿಗೊಡಿಸಿದ.

"ಬೆಳಗಾದ ನಂತರ ಇವೆತ್‌ಳು ನನ್ನೊಡನೆ ಹೇಗೆ ವರ್ತಿಸುವಳೋ ತಿಳಿಯದಂತಿದೆ, ಸಾವಾಲ್. " ಎಂದು ದೀನವದನದಿಂದ ನುಡಿದ ಸರ್‌ವೀನ್ನೀ.

ಅವರು ಕೊಂಚದೂರ ದಾರಿನಡೆಯುವ ಹೊತ್ತಿಗೆ ಬೆಳಕು ಮೆಲ್ಲಗೆ ಹರಡುತ್ತಿತ್ತು. ಕೋಳಿಗಳ ಎಚ್ಚರದ ಕೂಗುಗಳು ಕೇಳಿಬರುತ್ತಿದ್ದವು.

" ಇನ್ನು ಮನೆಯಕಡೆ ಹೊರಡುವ " ಎಂದು ಸಾವಾಲ್‌ನು

ಸೂಚಿಸಿದ.

ಸರ್ ವೀನ್ನೀಯು ತನ್ನ ಕೋಣೆಯನ್ನು ಸೇರುವ ಹೊತ್ತಿಗೆ ಪೂರ್ಣ ಬೆಳಗಾಗಿತ್ತು.

ಕಿಟಕಿಗಳನ್ನು ಮುಚ್ಚಿ ಹೊರಗಿನ ಬೆಳಕು ತನ್ನ ನಿದ್ದೆಯನ್ನು ಕೆಡಿಸದಂತೆ ಪೂರ್ಣ ಕತ್ತಲಾಗುವಂತೆ ಮಾಡಿ ಮಲಗಿದ. ಬೇಗ ನಿದ್ದೆ ಹತ್ತಿತು

ಹೊರಗೆ ಏನೋ ಹೆಚ್ಚಿನ ಸಪ್ಪಳವಾದುದರಿಂದ ಎಚ್ಚರವಾಯಿತು. ಎದ್ದು ಕಿಟಕಿಗಳನ್ನು ತೆರೆದು ನೋಡಿದ. ಇವೆತ್‌ಳು ಬಿಳಿಯ ಉಡುಪುಗಳನ್ನು ಧರಿಸಿ, ಅದೇ ತಾನೇ ಅರಳಿದ ಗುಲಾಬಿ ಹೂವಿನಂತೆ, ಕೆಳಗೆ ತೋಟದಲ್ಲಿ ನಸುನಗುತ್ತ ಅವನನ್ನು ನೋಡಿ, “ಇನ್ನೂ ಮಲಗುವುದೇ? ರಾತ್ರಿಯೆಲ್ಲವೂ ಏನು ಮಾಡಿದಿರಿ? ಇಷ್ಟು ಹೊತ್ತಾಗಿ ಏಳಲು ಕಾರಣವೇನು? ಹೊಸ ಅನುಭವಗಳೇನಾದರೂ...ಕೆಳಗೆ ಬನ್ನಿ ಬೇಗ....”ಎಂದು ಆಮಂತ್ರಿಸಿದಳು.

ನಿದ್ದೆಗೆಟ್ಟು ನಿರಾಶೆಯಿಂದ ರಾತ್ರಿಯೆಲ್ಲವೂ ಒಂದು ಬಗೆಯ ಯಾತನೆಯನ್ನು ಅನುಭವಿಸಿ ಕೊಂಚ ವಿಶ್ರಾಂತಿ ಪಡೆಯಬೇಕೆಂದು ಯತ್ನಿಸುವ ಸರ್ ವೀನ್ನೀಗೆ ಈ ರೀತಿಯಾಗಿ ಇವೆತ್‌ಳಿಂದ ಕುಚೇಷ್ಟೆಗೀಡಾಗುವುದು ಬೇಡಾಗಿತ್ತು. ತನ್ನ ನಿದ್ರಾಭಂಗವಾದ ದುಃಖವೊಂದು ಕಡೆ, ಇವಳಿಂದ ಅವಮಾನದ ಮಾತು ಕೇಳುವ ಪ್ರಸಂಗ ಒಂದು ಕಡೆ ಅವನನ್ನು ಹಣ್ಣಾಗಿಸಿದರೂ, ಇದಾವುದನ್ನು ತೋರಗೊಡದೆ “ಈಗ ಬಂದು ಬಿಟ್ಟೆ. ಮುಖ ತೊಳೆದು ಒಂದೆರಡು ನಿಮಿಷಗಳಲ್ಲಿ ಬಂದು ಬಿಡುವೆನು.” ಎಂದನು.

“ಆಗಲೇ ಹತ್ತು ಹೊಡೆಯಿತು. ಬೇಗ ಬಂದು ಬಿಡಿ. ನಿಮಗೊಂದು ಹೊಸ ಕಿವಿಮಾತನ್ನು ಹೇಳಬೇಕೆಂದಿದ್ದೇನೆ.”ಎಂದು ಅವಸರ ಪಡಿಸಿದಳು.

ಕೆಳಗೆ ತೋಟದಲ್ಲಿ ಬೆಂಚಿನ ಮೇಲೊಂದು ಪುಸ್ತಕವನ್ನು ಹಿಡಿದು ಕುಳಿತ ಇವೆತ್‌ಳನ್ನು ಸಮೀಪಿಸಿದನು. ಅವಳೊಂದಿಗೆ ರಾತ್ರಿ ನಡೆದ ಪ್ರಸಂಗದ ನೆನಪಾಗಲಿ ಅದರಿಂದ ಅವಳು ಕೋಪಗೊಂಡ ಭಾವನೆಗಳಾಗಲಿ ಇವೆತ್‌ಳ ಮುಖಚರ್ಯೆಯಲ್ಲಿ ಕಂಡು ಬರಲಿಲ್ಲ. ಸರ್ ವೀನ್ನೀಯು ಹತ್ತಿರ ಬಂದ ಕೂಡಲೇ ಪ್ರೀತಿಯಿಂದ ಅವನ ಕೈ ಆಸರದಿಂದ ತಾನಾಗಿಯೇ ಎದ್ದು ನಿಂತು

ತೋಟದ ಕೊನೆಯವರೆಗೆ ಅವನೊಂದಿಗೆ ಹೋಗಿ "ನೀವು ನನ್ನನ್ನು ಈಗಲೇ ಅಲ್ಲಿ ದೂರದಲ್ಲಿರುವ, ನಿನ್ನೆ ನಾವು ನೋಡಿದ ಗ್ರೇನೋಲೀ ಹೊಟೆಲಿಗೆ, ಕರೆದುಕೊಂಡು ಹೋಗಬೇಕು. ಅಲ್ಲಿ ನೀತಿವಂತ ಹೆಂಗಸರು ಹೋಗಬಾರದೆಂದು ನನ್ನ ತಾಯಿ ತಡೆಯುತ್ತಿರುವಳು. ಅಲ್ಲೇನಿದೆಯೆಂಬುದನ್ನು ನೋಡಬೇಕೆಂಬ ಆಶೆ ನನಗಿದೆ. ಅಲ್ಲಿ ಕೆಲ ಹೊತ್ತು ಸುಖವಾಗಿ ಕಾಲ ಕಳೆಯುವ; ನಾವೆಯಲ್ಲಿ ಆನಂದದಿಂದ ಸುಳಿದಾಡುವ. ನನ್ನ ಸಂಗಡ ಬರುವಿರಾ?" ಎಂದು ತನ್ನ ಯೋಜನೆಯನ್ನು ಸೂಚಿಸಿದಳು.

ಅಂದೇಕೋ ಇವೆತ್‌ಳ ಚೆಲುವು ಬಹು ಮನಮೋಹಕವಾಗಿತ್ತು. ಅವಳೊಂದು ಸುಮ ಮಲ್ಲಿಗೆಯಂತೆ ಕಾಣುತ್ತಿದ್ದಳು. ತಾನೇ ತಾನಾಗಿ ಕಾಡಿನಲ್ಲಿ ಬೆಳೆದು ನಿಂತ ಬಿಳಿ ರೋಜಾ ಪುಷ್ಪದಂತೆ ವಿಕಾಸ ಹೃದಯಿಯಾಗಿದ್ದಳು.

ಸುವಾಸನೆಯು ಎಲ್ಲೆಡೆಯಲ್ಲಿಯೂ ಹರಡಿಕೊಂಡಿತ್ತು. ಇದು ಅವಳು ಹಚ್ಚಿಕೊಂಡಿದ್ದ ವಾಸನೆ ದ್ರವ್ಯಗಳಿಂದಲೋ ಅಲ್ಲದೆ ಅವಳ ಸುಕೋಮಲ ಚರ್ಮದಿಂದಲೋ ಎಂಬುದನ್ನು ಹೇಳಲಾಗದು. ಅಂತೂ ಅವಳ ಹತ್ತಿರ ಇರುವುದೆಂದರೆ ಅದೊಂದು ಆನಂದದ ಅನುಭವವಾಗಿತ್ತು. ಅಂದು ಅವಳ ಕಣ್ಣುಗಳಿಂದ ಹೊರಸೂಸುತಿದ್ದ ಆ ಚೆಲುವು, ಆ ನೂತನ ಕಾಂತಿ ಅವನನ್ನು ಆಶ್ಚರ್ಯಗೊಳಿಸಿತ್ತು. ಹೊಸಬರಿಗೆ ಈ ಅನುಭವ ಹೊಸತೆಂದೇ ಹೇಳಬೇಕು.

"ಹನ್ನೊಂದಕ್ಕೆ ನಮ್ಮ ಮುಂಜಾನೆಯ ಉಪಾಹಾರವು ಮುಗಿಯುವುದು. ತಾಯಿಯು ಹೊರಗೆ ಬರುವುದಿಲ್ಲ ನಿಮ್ಮ ಸ್ನೇಹಿತನನ್ನು ಅವಳ ಜತೆಯಲ್ಲಿ ಬಿಟ್ಟು ನಾವಿಬ್ಬರೇ ಗ್ರೇನೋಲೀ ಹೋಟಲಿಗೆ ಹೋಗುವುದೆಂದು ನಿಶ್ಚಯವಾದಂತಾಯಿತಲ್ಲವೆ? ನಾವು ಇಲ್ಲೆಲ್ಲಿಯೋ ಮರೆಯಾಗಿರಬಹುದೆಂದು ಅವರು ತಿಳಿಯುವರು. ಈ ನಮ್ಮ ಹಂಚಿಕೆ ಅವರಿಗೆ ತಿಳಿಯಲಾಗದು. ನನ್ನನ್ನು ಕರೆದೊಯ್ಯುವಿರಲ್ಲವೇ?" ಎಂದು ಅವಳು ಕೇಳುತ್ತಿರುವಾಗ ಅವನ ದೃಷ್ಟಿ ನದಿಯ ಕಡೆ ಹೊರಳಿತ್ತು.

ಆ ನದಿಯ ಸೌಂದರ್ಯವನ್ನು ನೋಡಿ ಸರ್‌ವೀನ್ನೀಯು ಚಕಿತನಾದ. ಆ ಹೊಂಬಿಸಿಲಿನಲ್ಲಿ ತೇಲಿ ಬರುವ ಕಿರಣಗಳು ನದಿಯ ತಿಳಿನೀರಿನ

ಮೇಲೆ ಹರಡಿಕೊಂಡ ದೃಶ್ಯ ಬಲು ಮನೋಹರವಾಗಿತ್ತು. ನದಿಯ ತುಂಬು ನೀರಿನಲ್ಲಿ ಸೂರ್ಯ ಕಿರಣಗಳು ಬೆರೆತುಕೊಂಡು ಇವೆರಡರ ಸಮ್ಮಿಲನದಿಂದ ಹೊರ ಬರುವ ಆ ಬಿಸಿ ಹೊಗೆಯ ಸುಂದರ ದೃಶ್ಯ ಅವನನ್ನು ವಿಸ್ಮಯಗೊಳಿಸುವಂತೆ ಮಾಡಿತ್ತು. ಗಗನ ಮಂಡಲ ಪ್ರಸಾದಿತ ಆ ಆವಿಯು ನದಿಯ ನೀರನ್ನು ಚುಂಬಿಸಿ ಒಂದಾಗುವಂತೆ ಕಂಡು ಬರುವ ಆ ನಿಸರ್ಗ ಶೋಭೆಯು ಎಂತಹ ಕಾಮುಕನಿಗೂ ಆನಂದವನ್ನುಂಟು ಮಾಡುತ್ತಿತ್ತು. ಎಂದಮೇಲೆ ಇಂತಹ ಸನ್ನಿವೇಶಗಳ ಅನುಭವವನ್ನಾಶಿಸುವ ಸರ್‌ವೀನ್ನೀಗೆ ಇದು ಸ್ವರ್ಗ ಸಮಾನ ವೆಂದೆನಿಸಿತು.

ಆ ನದಿಯ ಮೇಲೆ ಇಂತಹ ಸುಂದರ ಸಮಯದಲ್ಲಿ ಹಾದು ಹೋಗುತ್ತಿದ್ದ ನಾವೆಗಳನ್ನು ಕಂಡು ಅವನಿಗೆ ಆನಂದವೆನಿಸಿತು. ತಮ್ಮತಮ್ಮ ಕೆಲಸಗಳ ಮೇಲೆ ಹೋಗುತ್ತಿದ್ದ ಆ ಪ್ರವಾಸಿಕರ. ನಾವೆಗಳು ಈ ನದಿಗೊಂದು ನೂತನ ಚೆಲುವನ್ನು ತಂದೊಡ್ಡಿದ್ದವು. ಹಬ್ಬದ ಸವಿ ಅನುಭವಕ್ಕೆ ಇಂತಹ ನಿಸರ್ಗ ಪ್ರದೇಶಗಳಿಗೆ ನಗರಗಳಿಂದ ಬರುವ ವಿಲಾಸಿಗಳನ್ನು ಕುಳ್ಳಿರಿಸಿಕೊಂಡು ಸುಳಿದಾಡುವ ಈ ನಾವೆಗಳು ಅವರೀರ್ವರಿಗೂ ಆನಂದವನ್ನುಂಟು ಮಾಡಿದವು. ಸರ್‌ವೀನ್ನೀಯು ಹೀಗೆ ಎಲ್ಲವನ್ನೂ ಮರೆತು ಆ ನಾವೆಗಳಲ್ಲಿ ಸುಖದಿಂದ ಕೆಲ ಸಮಯ ಕಳೆಯುವ ಪ್ರಸಂಗ ಬರಬಹುದೇ ಯೆಂದು ಯೋಚಿಸತೊಡಗಿದ. ಮಾರ್ಲೀ ಎಂಬ ವಿಹಾರ ಪ್ರದೇಶಕ್ಕೆ ನಗರದ ಜನರು ಬಂದು ಸುಖಲೋಲುಪರಾಗುವುದು ಸರ್‌ವೀನ್ನೀಗೆ ತಿಳಿದ ವಿಷಯವೇ. ತಾವಾಗಿಯೇ ಅಲ್ಲಿಗೆ ಬರುವೆನೆಂದು ಹೇಳಿದ ಇವೆತ್‌ಳ ಸೂಚನೆಗೆ ಬಹು ಉತ್ಸಾಹದಿಂದ " ಆಗ ಬಹುದು. " ಎಂದು ಸಮ್ಮತಿಯನ್ನಿತ್ತ.

ಊಟದ ಗಂಟೆ ಬಾರಿಸಿದುದರಿಂದ ಎಲ್ಲರೂ ಊಟದ ಟೇಬಲ ಮುಂದೆ ಬಂದು ಕುಳಿತರು. ಅಂದು ಅವರಿಗೆ ಆ ಊಟ ಬಹು ರುಚಿಕರವೆನಿಸಿತು. ಊಟವು ಮೌನವಾಗಿಯೇ ಮುಂದರಿಯಿತು ಎಲ್ಲರೂ ಶಾಂತಚಿತ್ತದಿಂದಿರಲು ಇವೆತ್‌ಳು ಮಾತ್ರ ಏಕೋ ಹೆಚ್ಚು ಅವಸರಪಡುತ್ತಿರುವಂತೆ ಕಂಡು ಬಂತು. ಊಟ ಮುಗಿಯುವ ವೇಳೆಗೆ ಸರಿಯಾಗಿ ಇವೆತ್‌ಳು " ಈ ಸಮಯದಲ್ಲಿ ಗಿಡಗಳ ನೆರಳಿನಲ್ಲಿ ವಿಹರಿಸ ಬೇಕೆಂದು ನನಗೆ ಆಶೆಯಾಗ ತೊಡಗಿದೆ '' ಎಂದು ನುಡಿದಳು.

" ಎಲ್ಲಿಯಾದರೂ ಉಂಟೇ ? ಈ ಉರಿಯುವ ಬಿಸಿಲಿನಲ್ಲಿ ಹೊರಗೆ ತಂಪಾಗಿರುವುದೆ ? ಏನು ಹುಚ್ಚುಮಾತು ಇವೆತ್ ?" ಎಂದಳು ಓಬಾರ್ದಿ.

" ಇಲ್ಲಮ್ಮ ಇವರು ನನ್ನ ಜತೆಯಲ್ಲಿ ಬರುವರು. ದಟ್ಟವಾಗಿ ಬೆಳೆದಿರುವ ಆ ಅಡವಿಯಲ್ಲಿ ಬಿಸಿಲಿನ ತಾಪ ಇರಲಾರದು. ಇಂತಹ ಪ್ರದೇಶದಲ್ಲಿ ಕೆಲಸಮಯ ಕಳೆಯಬೇಕೆಂದು ನನಗೆ ಆಶೆ ಯಾಗಿದೆ. ಸರ್ ವೀನ್ನೀಯರೇ ನಿಮಗೆ ಇದು ಒಪ್ಪಿಗೆ ತಾನೇ ? '' ಎಂದು ಕೇಳಿದಳು ಇವೆತ್.

" ಇದು ನನಗೆ ಒಪ್ಪಿಗೆ '' ಎಂದು ಅವನು ನುಡಿದೊಡನೆಯೇ ಇವೆತ್‌ಳು "ನನ್ನ ಹ್ಯಾಟ ತರುತ್ತೇನೆ '' ಎಂದು ಒಳಗೆ ಕೋಣೆಗೆ ಓಡಿದಳು.

ಅವಳ ಹುಮ್ಮಸದ ಸ್ವಭಾವವನ್ನು ಕಂಡು ಓಬಾರ್ದಿಯು "ಇವೆತ್ ಳದು ಹುಚ್ಚುಹುರುಪು" ಎಂದು ತನ್ನ ಕೈಯನ್ನು ಶ್ರೀಮಂತ ನಾವಾಲ್‌ನ ಕಡೆ ಚಾಚಿದಳು. ಅವನದನ್ನು ಚುಂಬಿಸಿದ. ಇಬ್ಬರು ನಕ್ಕು ಸುಮ್ಮನಾದರು.

ಸರ್ ವೀನ್ನೀಯು ಮತ್ತು ಇವೆತ್‌ಳು ತಮ್ಮ ಬಿಸಿಲಿನ ವಿಹಾರಕ್ಕೆಂದು ಜೊತೆಯಾಗಿ ಹೊರಬಿದ್ದರು. ನದಿಯನ್ನು ಸಮೀಪಿಸಿ' ಸೇತುವೆಯ ನೆರವಿನಿಂದ ಎದುರಿಗಿನ ದಡವನ್ನು ಸೇರಿ ಅಲ್ಲಿ ವಿಲೋ ಮರಗಳ ನೆರಳಿನಲ್ಲಿ ಕುಳಿತುಕೊಂಡರು.

ತನ್ನ ಕಿಸೆಯೊಳಗಿಂದ ಒಂದು ಪುಸ್ತಕವನ್ನು ತೆಗೆದು " ಇದನ್ನು ನೀವು ನನಗೆ ಇಂದು ಓದಿ ಕೇಳಿಸಬೇಕು " ಎಂದಳು.

" ನಾನೇ, ಛೇ. ನನಗೆ ಓದುವ ಅಭ್ಯಾಸವಿಲ್ಲ."

" ನಾನು ಈ ಒಣ ಉಪಚಾರ ಕೇಳುವವಳಲ್ಲ. ನೀವು ನನ್ನನ್ನು ಪ್ರೇಮಿಸಲು ಬಂದ ಯುವಕರಲ್ಲವೇ ? ನೀವು ನನ್ನನ್ನು ಸಂತೈಸಬೇಕಲ್ಲವೇ ? ಇದೇ ಏನು ನಿಮ್ಮ ಕಲಸ ! ಚೆನ್ನಾಗಿದೆ ! " ಎಂದು ಕೋಪಿಸಿಕೊಂಡವಳಂತೆ ನಟಿಸಿದಳು.

ನಿರ್ವಾಹವಿಲ್ಲದೆ ಪುಸ್ತಕ ತೆಗೆದು ಓದಲಾರಂಭಿಸಿದ. ಅದೊಂದು ಇರುವೆಗಳ ಮೇಲೆ ಬರೆದ ದೊಡ್ಡ ಪ್ರಬಂಧ. ಆ ಪುಸ್ತಕವನ್ನು ನೋಡಿ ಅವನಿಗೆ ಆಶ್ಚರ್ಯವೆನಿಸಿತು. " ಹೂ, ಆರಂಭಿಸಿ " ಎಂದು ಇವೆತ್‌ಳು ಎಚ್ಚರಿಸಿದಳು.

" ಇದೇನು ನಿನ್ನ ಹುಚ್ಚು ? ನನ್ನನ್ನು ಪರೀಕ್ಷೆ ಮಾಡಲು ಹೂಡಿದ

ಹಂಚಿಕೆಯೇನು?''

" ಇಲ್ಲ, ಇಲ್ಲ. ಅಂದು ನಾನು ಪುಸ್ತಕದ ಅಂಗಡಿಗೆ ಹೋದ ಸಮಯ ದಲ್ಲಿ ನನಗೆ ಈ ಇರುವೆಗಳ ಬಗ್ಗೆ ಉತ್ತಮ ಗ್ರಂಥ ಬೇಕಾಗಿತ್ತು. ಅವುಗಳ ಜೀವನ ರಹಸ್ಯ ತಿಳಿಯಬೇಕಾಗಿತ್ತು. ಕಾರಣ ಇದನ್ನು ಬೆಲೆ ಮಾಡಿದೆ. ಹೂಂ, ಓದಿರಿ "

ಇವೆತ್‌ಳು ಹಸಿರು ಹುಲ್ಲಿನ ಮೇಲೆ ಮಲಗಿ, ಅವನ ಕಡೆ ತಲೆ ತಿರು ಗಿಸಿ ಕೇಳುವ ಆತುರದಲ್ಲಿದ್ದಳು. ಸರ್ ವಿನ್ನೀಯು ಓದತೊಡಗಿದ:

'' ಈ ಇರುವೆಗಳ ದೇಹಾಕೃತಿಯು ಸೃಷ್ಟಿ ಮಾನವನಿಗೆ ಸರ್ವ ಬಗೆಯಲ್ಲಿಯೂ ಹೋಲುತ್ತದೆ. ಅದರಂತೆಯೇ ಅವುಗಳ ಸ್ವಭಾವ, ವರ್ತನೆ, ತಮ್ಮ ಸಮಾಜದಲ್ಲಿ ಬದುಕುವ ರೀತಿ, ಅವುಗಳು ಪರರಿಗಾಗಿ ಮಾಡುತ್ತಿರುವ ಸೇವೆ, ಅವುಗಳ ಪರೋಪಕಾರ ಬುದ್ಧಿ, ಮುಂತಾ ದುವನ್ನು ವಿಚಾರಿಸಿದರೆ, ಮನುಷ್ಯನಷ್ಟೇ ಇವುಗಳೂ ಚತುರರೆಂದು ಹೇಳಬಹುದು'' ಎಂದು ಏನೇನೋ ಬರೆದಿತ್ತು. ಇಷ್ಟು ಓದುವುದರೊಳಗೆ ಸರ್ ವಿನ್ನೀಯು " ಇಷ್ಟು ಸಾಕೆ?'' ಎಂದು ಪ್ರಶ್ನಿಸುವುದನ್ನು ಕಂಡು ಇವೆತ್‌ಳು ಏನೂ ಮಾತನಾಡದೇ ಅಲ್ಲಿ ಹರಿದು ಹೋಗುತ್ತಿದ್ದ ಒಂದು ಇರುವೆಯನ್ನು ತಡೆದು ಪರೀಕ್ಷೆ ಮಾಡತೊಡಗಿದಳು. ಪುಸ್ತಕದಲ್ಲಿ ಇವು ಗಳ ಜೀವನದ ಬಗ್ಗೆ ಚಿತ್ರಿಸಿದ ನಾನಾ ಬಗೆಯ ವಿವರಗಳೆಲ್ಲವನ್ನೂ ಆಸ್ಥೆ ಯಿಂದ ಕೇಳತೊಡಗಿದಳು. ಅವುಗಳು ಹಾವಿನ ವಾಸಕ್ಕೆ ನಿರ್ಮಿಸುತ್ತಲಿದ್ದ ಹುತ್ತಗಳನ್ನು, ಪರಸ್ಪರ ಜೀವನದಲ್ಲಿ ಅವರು ನೆರವಾಗುವ ವಿಧಾನವನ್ನೂ, ಕೆಲವು ಸಸ್ಯ ರಾಶಿಗಳಿಗೆ ತಂದಿರಿಸುವ ಆಹಾರ ಸಾಮುಗ್ರಿಯನ್ನೂ, ತಮ್ಮ ಹಸಿವೆಯನ್ನು ಪರಿಗಣಿಸದೇ, ನೆರೆಹೊರೆಯವರಿಗೆ ಅವುಗಳು ನೀಡುತ್ತಿ ರುವ ನೆರವನ್ನೂ ಹೆಚ್ಚು ಉತ್ಸುಕತೆಯಿಂದ ಕೇಳತೊಡಗಿದಳು. ಈ ಇರುವೆ ಗಳ ಜೀವನ ಮಾನವ ಕೋಟಿಗೆ ಹಿರಿದಾದ ಆದರ್ಶವನ್ನು ಸಾರುತ್ತಿರು ವುದು. ಇವುಗಳು ಜಾಣತನದ ಜೀವಿಗಳೆಂದು ಹೆಸರು ಪಡೆದಿವೆಯೆಂದು ತಿಳಿದು ಇವೆತ್‌ಳು ಹಿಗ್ಗಿದಳು. ದೊಡ್ಡವರೆಂದೂ, ಅತಿ ಕುಶಲರೆಂದೂ, ಜೀವ ಕೋಟಿಯಲ್ಲಿ ಶ್ರೇಷ್ಠರೆಂದೂ, ನಿರ್ಧರಿಸಲ್ಪಟ್ಟ ಈ ಮನುಜ ಕುಲ ದಲ್ಲಿ ಬೆಳೆದಿರುವ ಜಿಗುಪ್ಸೆ, ಪರಸ್ಪರ ದ್ವೇಷ, ಅಸೂಯೆಗಳನ್ನು ನೆನೆದು ಮನುಜ ಕುಲವನ್ನೇ ದ್ವೇಷಿಸುವಷ್ಟು ಕೋಪ ಇವೆತ್‌ಳಿಗೆ ಉಂಟಾಯಿತು.

ಆ ಸಮಯಕ್ಕೆ ಅತಿ ಸಣ್ಣ ಪ್ರಮಾಣದ ಇರುವೆಯೊಂದು ಅವಳ ಬೆರಳ ನ್ನೇರಲು ದಿಟ್ಟಿಸಿ ನೋಡತೊಡಗಿದಳು.

ಅವುಗಳು ತಮ್ಮ ನಿತ್ಯ ಜೀವನದಲ್ಲಿ ತೋರುತ್ತಿರುವ ಸಹಕಾರ ಬುದ್ಧಿ, ವಿರೋಧಿಗಳನ್ನು ಎದುರಿಸುವ ವಿಧಾನ, ತಮ್ಮ ಪ್ರಾಣವನ್ನು ಕಾಪಾಡಿಕೊಳ್ಳಲು ಅವುಗಳು ಕೈಕೊಳ್ಳುವ ಯೋಜನೆಗಳು ಮುಂತಾದ ವನ್ನು ಕೇಳಿದಂತೆಲ್ಲ ಅವಳು ಉತ್ಸಾಹದಿಂದ ತನ್ನ ಬೆರಳಿನ ಮೇಲೆ ಇದ್ದ ಮತ್ತೊಂದು ಇರುವೆಯನ್ನು ಚುಂಬಿಸಿದಳು.

ಇರುವೆ ಕಡಿದುದರಿಂದ ಕೂಡಲೇ ಚೀರಿದಳು. ಅವಳು ಹಾಗೆ ಚೀರಿ ದುದನ್ನು ಕಂಡು ಸರ್‌ವಿನ್ನೀಯು ಓದುತ್ತಿದ್ದವನು ಏನಾಯಿತೆಂದು ತಲೆ ಯೆತ್ತಿ ನೋಡಿದ. ಆ ಇರುವೆ ಅವಳ ಮುಖದ ಮೇಲೆ ಇದ್ದುದನ್ನು ಕೆಳಗೆ ಕೆಡವಿ, ಆ ಇರುವೆಯಿಂದ ನೋಯಿಸಲ್ಪಟ್ಟ ಕೆನ್ನೆಯನ್ನು ಅತಿ ಆತುರ ದಿಂದ ಮುದ್ದಿಸಿದ ಕೆಲ ಸಮಯ ಅವನ ತುಟಿಗಳು ಕೆನ್ನೆಯ ಮೇಲಿದ್ದರೂ ಇವೆತ್‌ಳು ಅದನ್ನು ನಿವಾರಿಸುವ ಗೋಜಿಗೆ ಹೋಗಲಿಲ್ಲ.

ಈ ಪ್ರಸಂಗ ಮುಗಿದ ಮೇಲೆ "ಈ ನಿಮ್ಮ ಮುದ್ದು, ಆ ಕಾದಂಬರಿ ಗಿಂತಲೂ ಚೆನ್ನಾಗಿದೆ. ಇನ್ನು ಗ್ರೆನೋಲೀಗೆ ಹೋಗೋಣವೇ?'' ಎಂದಳು.

ಮೆಲ್ಲನೆ ನಡೆಯುತ್ತ ಕೇವಲ ಸತಿ-ಪತಿಯರಿಗೂ, ವಿಲಾಸಿಗಳಿಗೂ ಬಲು ರಮ್ಯವುಯವೆಂದು ಪರಿಗಣಿಸಿದ ಭಾಗಕ್ಕೆ ಇವರಿಬ್ಬರೂ ಬಂದರು. ಅಲ್ಲಿ ಗಿಡಗಳ ನೆರಳಿನಲ್ಲಿ ಹೆಚ್ಚು ತನುವಿತ್ತು. ಬಿಸಿಲನ ತಾಪವೇನೂ ತಿಳಿ ಯುತ್ತಿರಲಿಲ್ಲ.

ಆ ಪ್ರದೇಶಕ್ಕೆ ಹೋದ ಕೂಡಲೇ, ವಿಹಾರಕ್ಕೆಂದು ಬಂದ ಅನೇಕ ವಿಲಾಸಿನಿಯರನ್ನೂ, ಅವರ ಸರಿಜೋಡಿಗೆಂದು ಬಂದ ಯುವಕರನ್ನು ಹೊತ್ತುಕೊಂಡು ಬರುವ ನಾವೆಗಳನ್ನು ಅವರು ಕಂಡರು. ಜೋಡು ಜೋಡಾಗಿ ವಿಲಾಸಿಗಳು ಬಂದಿಳಿಯುವುದನ್ನು ಇವೆತ್‌ಳು ಕಂಡಳು. ಅನೇಕ ಸಂಸಾರಿಗಳೂ ತಮ್ಮ ಪರಿವಾರದೊಂದಿಗೆ ಬಂದಿರುವುದನ್ನೂ ಕಂಡು ಇದು ಕೇವಲ ನೀತಿಬಾಹಿರರಾದ ವಿಲಾಸಿಗಳಿಗೇ ಮುಡುಪಾದ ಸ್ಥಳವಲ್ಲ ವೆಂದು ತಿಳಿದು ಹಿಗ್ಗಿದಳು. ಮುಂದೆ ನಡೆದಂತೆಲ್ಲ ಜನರ ಕೋಲಾಹಲ, ಅವರ ಗುಜು ಗುಜು, ಆನಂದದ ನಗು, ಸರಸದ ಪಿಸು ಮಾತು ಮುಂತಾ

ದವುಗಳಲ್ಲಿ ಮಗ್ನರಾದ ಜನರನ್ನು ಇವರಿಬ್ಬರೂ ಕಂಡರು.

ಆ ನದಿಯ ದಡಕ್ಕೆ ಆತುಗೊಂಡ ಒಂದು ದೊಡ್ಡ ಹಡಗಿನ ಮೇಲೆ ಗಲಭೆ ಹೆಚ್ಚಾಗಿರುವುದನ್ನು ಕಂಡು ಅದನ್ನು ಸಮೀಪಿಸಿದರು. ಅಲ್ಲಿ ಮುಂದಿರಿಸಿದ ಟೇಬಲದ ಮೇಲೆ ಅನೇಕ ತರಹದ ಪಾನೀಯಗಳನ್ನು ಸೇವಿಸುತ್ತಿರುವುದನ್ನು, ಆಟ ಪಾಟ, ನೃತ್ಯಗಳು ನಡೆಯುತ್ತಿರುವುದನ್ನೂ ಕಂಡರು. ಪಾನೀಯದಿಂದ ಪ್ರಮತ್ತರಾದ ಅವರ ಮಾತಿನಲ್ಲಾಗಲಿ, ಅವರ ಹಾಡುಗಳಲ್ಲಾಗಲಿ ಅರ್ಥವಿರಲಿಲ್ಲ. ಕೆಲವರು ನೀರಿನಲ್ಲಿ ಬಿದ್ದು ಈಜುವ ದೃಶ್ಯವೂ ಒಂದು ಸುಂದರ ನೋಟವಾಗಿತ್ತು.

ಅಲಂಕೃತವಾದ ಸುಂದರ ಒಂಟಿ ನಾವೆಗಳ ಮೇಲೆ ಅನೇಕ ದಂಪತಿಗಳು ವಿಲಾಸದಿಂದ ದೋಣಿ ಆಟದಲ್ಲಿ ಮಗ್ನರಾಗಿದ್ದರು. ಹೆಂಗಳೆಯರು ರಂಗು ರಂಗಿನ ಅರಿವೆಗಳಿಂದ ಅಲಂಕೃತರಾಗಿ ಮನೋಹರವಾಗಿ ಕಾಣುತ್ತಿದ್ದರು. ಈ ದೋಣಿಗಳನ್ನು ನಡೆಸುವವರು ದುಂಡಾಳುಗಳಾಗಿದ್ದರಲ್ಲದೆ ಅವರ ದಷ್ಟ ಪುಷ್ಟ ಮೈ ನೋಡಲು ಸೊಗಸೆನಿಸುತ್ತಿತ್ತು. ಬಿಸಿಲಿನ ತಾಪ ತಡೆಯುವದೆಂದು ದಂಪತಿಗಳನ್ನು ಮರೆಯಾಗಿಸುವ ಆ ಕೊಡೆಗಳೂ ಬಣ್ಣ ಬಣ್ಣದವುಗಳಾಗಿ ಸೂರ್ಯನ ಬಿಸಿಲಿನಲ್ಲಿ ಅವುಗಳು ಬಹು ಸುಂದರವಾಗಿ ಕಾಣುತ್ತಿದ್ದುವು. ಅವುಗಳ ನೆರಳಿನಲ್ಲಿ ಕ್ರೀಡಾಸಕ್ತರಾದ ದಂಪತಿಗಳ ಹರುಷ ಉತ್ಸಾಹವಂತೂ ಆ ದೋಣಿಗಾರರನ್ನು ಅತ್ಯಂತ ಆನಂದದಲ್ಲಿ ಕೆಡವಿತ್ತೆಂಬುದು ಅವರು ದೋಣಿ ಸಾಗಿಸುತ್ತಲಿದ್ದ ರೀತಿಯೇ ಹೇಳುತ್ತಿತ್ತು.

ಸಾಲಾಗಿ ನಡೆದ ಈ ದೋಣಿಗಳ ಸಾಗಾಟ ಇದೇನು ದೋಣಿ ಆಟದ ಸ್ಪರ್ಧೆಯೋ ಯೆಂಬಂತೆ ಕಾಣುತ್ತಿತ್ತು. ನಾಮುಂದು ನೀಮುಂದು ಹೋಗಬೇಕೆಂಬ ಆತುರ ನಾವಿಕರಲ್ಲುಂಟಾಗಿ ಇದೊಂದು ಕೋಲಾಹಲಕ್ಕೆ ಕಾರಣವಾಗಬಹುದೇಂದೆನಿಸುತ್ತಿತ್ತು. ಇಂತಹ ಆನಂದದ ಸಮಾವೇಶದಲ್ಲಿ ಸುಖವನ್ನು ಅನುಭವಿಸದವನೇ ಪಾಪಿಯೆಂದೆನ್ನಬೇಕು.

ನದಿಗೆ ಆತುಕೊಂಡು ನಿಂತಿದ್ದ ದೊಡ್ಡ ಹಡಗಿನ ಅಂಗಳದಲ್ಲಿ ದಿವ್ಯ ಉಪಹಾರ ಗೃಹವು ಏರ್ಪಟ್ಟಿತ್ತು. ಅಲ್ಲಿ ಕುಳಿತು ಅನೇಕ ಬಗೆಯ ವಿಲಾಸದಲ್ಲಿ ಮಗ್ನರಾದ ಜನರ ನೋಟವು ಇವೆತ್‌ಳ ದೃಷ್ಟಿಯನ್ನು ಆಕರ್ಷಿಸಿತು. ಇವಳು ಸರ್‌ವಿನ್ನೀಯೊಂದಿಗೆ ಅದರಲ್ಲಿ ಪ್ರವೇಶ ಮಾಡಿ ಅವರ ಮಧ್ಯೆ

ನಿಂತು ವೈಮರೆತು ಆ ರಸಿಕ ವೃಂದವನ್ನು ಎವೆಯಿಕ್ಕದೆ ನೋಡತೊಡಗಿದಳು. ಅಲ್ಲಿ ನೆರೆದಿದ್ದ ಸುರ ಸುಂದರಿಯರನ್ನು ನೋಡಿ ಚಕಿತಳಾದಳು. ಆ ಗುಂಪಿನಲ್ಲಿ ಅತಿ ಸುಂದರಳಾದೊಬ್ಬಳ ಕಡೆ ಬೆರಳು ಮಾಡಿ ತೋರಿಸಿ "ಅವಳ ಕೂದಲೆಷ್ಟು ಅಂದವಾಗಿವೆ ನೋಡಿದಿರಾ?" ಎಂದು ಕೇಳಿದಳು.

ಅಲ್ಲಿಯ ಸಂಗೀತಗೋಷ್ಠಿಯವರು ತಮ್ಮ ಕಾರ್ಯಕ್ರಮಾನುಸಾರ ಭ್ರಮಣ ನೃತ್ಯಗೀತೆಯನ್ನು ವಾದ್ಯದಲ್ಲಿ ನುಡಿಸುತ್ತಿದ್ದರು. ಅಲ್ಲಿಯ ಜನರು ಹೆಣ್ಣು ಗಂಡು ಜತೆ ಜತೆಯಾಗಿ ಕುಣಿಯತೊಡಗಿದ್ದರು. ಇವೆತ್‌ಳು ತನ್ನ ಪ್ರಿಯಮಿತ್ರನೊಂದಿಗೆ ಅವರ ನೃತ್ಯದಲ್ಲಿ ಭಾಗವಹಿಸಿ ಅಂದು ಉತ್ತಮ ರೀತಿಯಲ್ಲಿ ಕುಣಿಯತೊಡಗಿದಳು. ಅವರಿಬ್ಬರ ಆ ಕುಣಿತಕ್ಕೆ ಆ ವೃಂದದವರೆಲ್ಲ ಬೆರಗಾಗಿ ನೋಡತೊಡಗಿದರು. ಇವರಿಬ್ಬರ ಸುಂದರವಾದ ಶಾಸ್ತ್ರ ರೀತಿಯ ಕುಣಿತವನ್ನು ಕಂಡು ಮೈಮರೆತು ತನ್ನ ವಾದ್ಯವನ್ನು ಅತ್ಯುತ್ತಮ ರೀತಿಯಲ್ಲಿ ಬಾರಿಸುವ ಭರದಲ್ಲಿ ಓರ್ವನು ಮಾದಕಪಾನೀಯವನ್ನು ಹೆಚ್ಚಾಗಿ ಸೇವಿಸಿದುದರಿಂದ, ಎಚ್ಚರ ತಪ್ಪಿ ಕೆಳಗುರುಳಿದ. ಅವನನ್ನು ಉಪಚರಿಸಲು ಅವನ ಮಿತ್ರರು ಬೇರೊಂದು ಸ್ಥಳಕ್ಕೆ ಕರೆದೊಯ್ದರು. ನೃತ್ಯವು ಅಲ್ಲಿಗೆ ನಿಲ್ಲಲು ಆಗಂತುಕರು ಅವರನ್ನು ಹಿಂಬಾಲಿಸಿ ಹೋಗುತ್ತಿರಲು ಸಾಲಾಗಿ ನೋಡುತ್ತಲಿದ್ದ ಜನರು ಈ ಜೋಡಿಯ ನೃತ್ಯ ನೈಪುಣ್ಯವನ್ನು, ಇವರ ಸುಂದರ ರೂಪವನ್ನೂ ಕುರಿತು ಹೊಗಳತೊಡಗಿದ್ದರು. ಆ ವಾದ್ಯಗಾರರನನ್ನು ಅವನ ಮಿತ್ರರು ನದಿಯ ದಡಕ್ಕೆ ಕರೆದೊಯ್ದು ನೀರಲ್ಲಿ ತೂರಿ ಒಗೆದರು. ನೀರಿನಲ್ಲಿ ಬಿದ್ದ ಅವನು ಚೇತರಿಸಿಕೊಂಡೆದ್ದು ದಡವನ್ನು ಸೇರಲು ಹವಣಿಸುತ್ತಿದ್ದನು. ಈ ಕುಚೇಷ್ಟೆಯ ಪ್ರಸಂಗ ಇವೆತ್‌ಳಿಗೆ ಹುರುಪಿನ ಆನಂದವನ್ನುಂಟು ಮಾಡಿತು. "ಏನು ಈ ವಿನೋದ? ಎಷ್ಟು ಆನಂದವಾಗಿದೆ? ಈ ಜನರ ಹುಮ್ಮಸದ ವಿಲಾಸಮಯ ಜೀವನ ಎಷ್ಟು ಸುಖಕರವಾಗಿದೆ?" ಎಂದು ಬಿದ್ದು ಬಿದ್ದು ನಗುತ್ತ ಕುಣಿದಾಡಿದಳು.

ಸಾಮಾನ್ಯ ಜನರ ಈ ವಿನೋದದ ಆಟ ಪಾಟಗಳಲ್ಲಿ ಇವೆತ್‌ಳು ತೋರುತ್ತಿರುವ ಆನಂದ ಸರ್‌ವೀನ್ನಿಗೆ ರುಚಿಸಲಿಲ್ಲ. ಇದು ಅವಳ ಅಂತಸ್ತಿಗೆ ಕುಂದು ತರುವ ಪ್ರಕರಣವೆಂದು ನೆನೆದು "ಇದೇನು ಇವೆತ್!

ನೀನು ಯಾರೆಂಬುದನ್ನು ಮರೆತಂತೆ ಕಾಣುತ್ತದೆ." ಎಂದು ಇನ್ನೂ ಏನೇನೋ ಹೇಳುವುದರಲ್ಲಿದ್ದನು. ಆದರೆ ಅವಳು ಆ ಮಾತಿನ ಕಡೆ ಲಕ್ಷ್ಯ ಕೊಡದೆ "ಮಿತ್ರರೆ, ನನಗೆ ನೀರಿನಲ್ಲಿ ಈಜಬೇಕೆಂದೆನಿಸಿದೆ. ನೀವೂ ಬರುವಿರಾ?" ಎಂದು ಕೇಳಿದ ಪ್ರಶ್ನೆಗೆ ಆಗಬಹುದೆಂದು ತನ್ನ ಒಪ್ಪಿಗೆಯನ್ನು ಸೂಚಿಸಲು ಇಬ್ಬರೂ, ಈ ಕಾರ್ಯಕ್ರಮಕ್ಕಾಗಿ ಏರ್ಪಡಿಸಿದ ಸ್ಥಳಕ್ಕೆ ಹೋಗಿ ಅಲ್ಲಿ ಬೇಕಾದ ಈಜುವ ಉಡುಪುಗಳನ್ನು ತೆಗೆದುಕೊಂಡು ಇಬ್ಬರೂ ನೀರಿನಲ್ಲಿ ಬಿದ್ದು ಈಜತೊಡಗಿದರು. ಇವೆತ್‌ಳು ಈಜುವುದರಲ್ಲಿ ನುರಿತ ಆಟಗಾರಳೆ. ಬಾದು ಸರ್‌ವೀನ್ನಿಗೆ ಅಂದು ತಿಳಿಯಿತು. ನೀರಿನ ಅಲೆಗಳು ಇವೆತ್‌ಳಿಗೆ ಹೆಚ್ಚು ಹುರುಪನ್ನೀಯಲು ಅತಿ ಉತ್ಸಾಹದಿಂದ ಈಜತೊಡಗಿದಳು. ಇವಳ ಕುಶಲತೆಗೆ, ದೇಹಶಕ್ತಿಗೆ ಅವನು ಬೆರಗಾಗಿ ನೀರಿನಲ್ಲಿ ವರುಣ ದೇವತೆಯಂತೆ ಕಾಣಿಸುವ ಅವಳ ದೇಹ ಸೌಂದರ್ಯವನ್ನು ಕಂಡು ಅವನು ಬೆರಗಾದ. ಪ್ರೇಮದ ಪೂರ್ಣ ಆವೇಶದಲ್ಲಿರುವ ಈ ಪರಿಸ್ಥಿತಿಯಲ್ಲಿಯೇ ತನ್ನ ಬಗ್ಗೆ ಇವಳಿಗಿರುವ ಪ್ರೇಮದ ಆಳವನ್ನು ಮತ್ತು ಅವಳ ನಿರ್ಣಯವನ್ನು, ತಿಳಿಯುವುದು ಉಚಿತವೆಂದು ಯೋಚಿಸುತ್ತಿರುವಾಗ ಅವಳು ತೀರ ಹತ್ತಿರ ಬಂದು "ಮಿತ್ರರೇ ನೀವು ಇಂದು ಬಲು ಸುಂದರವಾಗಿ ಕಾಣುವಿರಿ" ಎಂದಳು.

ಇದು ಕುಚೇಷ್ಟೆಯ ಮಾತೆಂದೂ ತನ್ನನ್ನು ಪರಾಭವಿಸಲು ಆಡಿದ ಹಾಸ್ಯಾಸ್ಪದ ನುಡಿಯೆಂದು ಕೊಂಚ ಕೋಪಗೊಂಡು, ಅವಳ ಸವಾಲಿಗೆ ಸರಿಯಾದ ಉತ್ತರವೀಯ ಬೇಕೆಂಬ ಉದ್ದೇಶದಿಂದ "ಈ ಬಗೆಯ ಜೀವನ ನಿನಗೆ ಸರಿಯಲ್ಲ ಇವೆತ್" ಎಂದನು.

"ಇದರರ್ಥ ಏನು ?"

"ತಿಳಿದೂ ತಿಳಿಯದವಳಂತೆ ನಟನೆಮಾಡಬೇಡ, ಸಾಕುಮಾಡು ನಿನ್ನ ಈ ಹಾಸ್ಯವನ್ನು."

"ಪ್ರಮಾಣಮಾಡಿ ಹೇಳುತ್ತೇನೆ. ನಿಮ್ಮ ಮಾತಿನ ಅರ್ಥ ನನಗಾಗಿಲ್ಲ."

"ಈ ಕುಚೇಷ್ಟೆಯ ಆಟ ಸಾಕು. ನಿನ್ನ ನಿಶ್ಚಯವೇನು ಹೇಳು ಇವೆತ್."

" ನನಗೊಂದೂ ಅರ್ಥವಾಗುತ್ತಿಲ್ಲ "

" ಸಾಕುಮಾಡು ನಿನ್ನ ಈ ಹುಚ್ಚು ಹರಟೆ. ನಿನ್ನೆ ರಾತ್ರಿ ನಾನು ನಿನಗೆ ಸೂಚಿಸಲಿಲ್ಲವೇ ? "

" ನನಗೆ ನೆನಪು ಉಳಿದಿಲ್ಲ. ದಯಮಾಡಿ ಅದೇನೆಂಬುದನ್ನು ಹೇಳೋಣವಾಗಲಿ "

" ನಿನ್ನನ್ನು ನಾನು ಪ್ರೀತಿಸುತ್ತೇನೆ ಯೆಂದು ನಿನ್ನೆ ನಾನು ನಿನಗೆ ಹೇಳ ಲಿಲ್ಲವೆ? "

" ನೀವೇ ? "

" ಅಹುದು, ನಾನೇ. "

" ಹುಚ್ಚು ಮಾತು. ಅರ್ಥವಿಲ್ಲದ ಹರಟೆ. "

" ಪ್ರಮಾಣಮಾಡಿ ಹೇಳುತ್ತೇನೆ ಇವೆತ್. "

" ಆದರೆ ನನ್ನನ್ನು ನೀವು ಪ್ರೀತಿಸುವಿರೆಂದು, ನಾನು ಹೇಗೆ ನಂಬ ಬೇಕು? ಬಾಯಿಮಾತಿನಿಂದೇನು ಪ್ರಯೋಜನ ? "

" ಸಮಯ ದೊರೆತರೆ ನಿದರ್ಶನಗಳಿಂದಲೂ ಸ್ಪಷ್ಟೀಕರಿಸಬಲ್ಲೆ. "

" ಯಾವ ಬಗೆಯ ಸಮಯ "

" ನಿನ್ನನ್ನು ಪ್ರೀತಿಸುವೆನೆಂಬ ಸಮಯ. ನಿದರ್ಶನ ಪೂರ್ವಕವಾಗಿ ಸಪ್ರಮಣವಾಗಿ ತೋರಿಸುವೆನು. "

" ಹಾಗೆ ಮಾಡಿ ನಿಮ್ಮ ಹಕ್ಕನ್ನು ಸ್ಥಾಪಿಸಿ ಕಾದುಕೊಳ್ಳುವುದು ಒಳಿತು. ಒಣಮಾತೇಕೆ ? "

" ಈ ಮಾತು ನೀನು ನಿನ್ನೆ ರಾತ್ರಿ ಸೂಚಿಸಲಿಲ್ಲ. "

" ನೀವು ಕೇಳಲೇ ಇಲ್ಲವಲ್ಲ. ನಿಮ್ಮದು ಕೇವಲ ಮೂರ್ಖರ ಮಾತಾಗಿದೆ ನನ್ನ ಮುಂದೆ ನೀವು ಹೇಳಿದರೇನು ಪ್ರಯೋಜನ? ನನ್ನನ್ನು ಸುಮ್ಮನೆ ಕಾಡಬೇಡ

" ಮತ್ತಾರಿಗೆ ಹೇಳಬೇಕು ? "

" ನನ್ನ ತಾಯಿಗೆ. "

" ನಿನ್ನ ತಾಯಿಗೆ?ಅದು ಆಗದ ಮಾತು. ಅವರಿಗೇಕೆ ಈ ಮಾತು ನಾನು ತಿಳಿಸಬೇಕು? ತಿಳಿಯಬೇಕಾದವಳು ನೀನಲ್ಲವೆ, ಇವೆತ್?" ಎಂದು

ಹೇಳಿ ಸರ್‌ವೀನ್ನಿಯು ಗಹಗಹಿಸಿ ನಕ್ಕುಬಿಟ್ಟ.

ಈ ನಗು ಅವಳನ್ನು ಕೆರಳಿಸಿತು. ಅವಳು ನೆಟ್ಟನೋಟದಿಂದ ಅವನ್ನು ನೋಡಿ " ನೀವು ಮದುವೆಯಾಗುವಷ್ಟು ಮಮತೆ, ವಿಶ್ವಾಸ, ಪ್ರೀತಿ ನನ್ನ ಮೇಲೆ ತೋರುವುದೇ ನಿಜವಾದರೆ, ನನ್ನನ್ನು ನೀವು ಮದುವೆಯಾಗುವ ವಿಷಯ ನನ್ನ ತಾಯಿಯೊಂದಿಗೆ ಪ್ರಶ್ನೆಮಾಡಿ ಅವಳ ಅಭಿಪ್ರಾಯವನ್ನು ತಿಳಿದುಕೊಳ್ಳಿ. ಅನಂತರ ನಾನು ನನ್ನ ನಿಶ್ಚಯುವೇನೆಂಬುದನ್ನು ಹೇಳುವೆ." ಎಂದು ನುಡಿದಳು.

ಇದರಿಂದ ಸರ್‌ವೀನ್ನೀಗೆ ಸಮಾಧಾನವಾದಂತೆ ಕಂಡುಬರಲಿಲ್ಲ. ಕೊಂಚ ಸಿಟ್ಟಿನ ಧೋರಣೆಯಲ್ಲಿಯೇ " ನನ್ನನ್ನು ನೀನು ಯಾರೋ ಸಾಮಾನ್ಯಮನುಷ್ಯನೆಂದು ಭಾವಿಸಿ ಮಾತನಾಡುವಂತಿದೆ. " ಎಂದು ಕೇಳಿದ.

" ನಿಮ್ಮ ಮಾತಿನ ಅರ್ಥ ನಿಜವಾಗಿಯೂ ನನಗಿನ್ನೂ ಆಗಿಲ್ಲ. " ಎಂದು ಮೆಲ್ಲನೆ ಉತ್ತರವಿತ್ತಳು.

ಈ ಮಾತಿಗೆ ಅವನು ಕೊಂಚ ರೊಚ್ಚಿಗೆದ್ದು ಅದೇ ಆ ವೇಶದಲ್ಲಿಯೇ " ಇವೆತ್ ನಿಲ್ಲಿಸು ನಿನ್ನ ಈ ಹುಡುಗಾಟದ ಪ್ರೇಮದ ಪ್ರಕರಣ. ಇನ್ನು ನಾನು ಹೆಚ್ಚು ಸಮಯ ನಿರೀಕ್ಷಿಸಲಾರೆ. ಈಗಾಗಲೇ ಬಹಳ ದಿನಳಿಂದ ನಾನು ಕಾಯುತ್ತಲಿದ್ದೇನೆ. ನೀನು ಓರ್ವ ಸಾಮಾನ್ಯ ಅಂಗಡಿಯಲ್ಲಿ ಜನರನ್ನು ಆಕರ್ಷಿಸಲು ನಿಯಮಿಸಿದ ಹೆಣ್ಣಿನಂತೆ ಮಾತನಾಡುತ್ತಿರುವೆ. ಈ ವೇಷ ನೀನಿನ್ನು ನಿಲ್ಲಿಸಬೇಕು. ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವಿರಲಿ. ಆದರೆ ನಿನ್ನನ್ನು ವಂಚಿಸುವ ಮನಸ್ಸು ನನ್ನದಲ್ಲ. ನಾವಿಬ್ಬರೂ ಕೂಡಿ ಮದುವೆಯಾಗುವುದಂತೂ ಅಸಂಭವವೇ ಸರಿ. ನಾವು ವಿಲಾಸಿಗಳಂತೆ ಇರುವುದೇ ಅನುಕೂಲಕ್ಕೆ ಸಲ್ಲುವ ಮಾತು. ಸತಿಪತಿಯರಂತೆ ನಾವು ಜೀವಿಸುವುದು ಅಶಕ್ಯ. ನಿನಗೆ ಸತಿಯಾಗಿ ಬಾಳುವ ಅವಕಾಶವಿಲ್ಲ. ಅದನ್ನು ಈ ಜನ್ಮದಲ್ಲಿ ನೀನು ಕಳೆದುಕೊಂಡಿರುವಿ.ನಾನು ನಿನ್ನನ್ನು ಪ್ರೀತಿಸುತ್ತೇನೆ.ಇದರಲ್ಲಿ ಯಾವ ಬಗೆಯ ಸಂದೇಹವಿಲ್ಲ ಮೋಸವೂ ಇಲ್ಲ.ನಿನಗೆ ನನ್ನಲ್ಲಿ ಹೆಚ್ಚು ಪ್ರೀತಿಯಿದೆ.ಇದು.ನಿಶ್ಚಯ ನಿನ್ನನ್ನು ಮನಸಾರ ಪ್ರೀತಿಸುತ್ತೇನೆ; ಇದರಲ್ಲಿ ಸತ್ಯವಿದೆ. ಆದರೆ, ನಾನು ನಿನ್ನನ್ನು ಮದುವೆಯಾಗಲಾರೆ. ನನ್ನ ಈ

ಮನೋಗತವು ನಿನಗೆ ತಿಳಿಯದೆಂದು ನಾಟಕವನ್ನಾಡಬೇಡ. ನೀನು ಯಾರೆಂಬುದು, ನಿನ್ನ ಅಂತಸ್ತು ಏನೆಂಬುದನ್ನು ತಿಳಿಯದಂತಹ ಮೂರ್ಖ ನಾನಲ್ಲ. " ಎಂದು ಆವೇಶದಿಂದ ಹೇಳಿದ.

ಇವೆತ್ ಸುಮ್ಮನೇ ಎವೆಇಕ್ಕದೇ ಅವನನ್ನು ನೋಡುತ್ತಿದ್ದಳು. ಅವರಿಬ್ಬರೂ ನೀರಿನಲ್ಲಿ ಕೈಕಾಲುಗಳನ್ನು ಆಡಿಸುತ್ತ ನಿಂತು ಈಜುತ್ತಿದ್ದರು. ಆವೇಶದಲ್ಲಿ ಅವನು ಹೇಳಿದ ಮಾತುಗಳ ಗೂಢಾರ್ಥ ಅವಳಿಗೆ ಬೇಗ ತಿಳಿಯಲಿಲ್ಲ. ಯೋಚಿಸಿದಳು. ಕೈಗಳಿಂದ ತಲೆಯ ಕೂದಲುಗಳನ್ನು ಕೆಡವಿಕೊಂಡಳು. ಅವಳ ಮುಖ ಕೆಂಪಾಯಿತು. ಮುಖವತ್ತ ತಿರುವಿಕೊಂಡು ಅವಸರದಿಂದ ವೇಗವಾಗಿ ಈಜುತ್ತ ದಡವನ್ನು ಸೇರಿದಳು. ಅವಳನ್ನು ಹಿಂಬಾಲಿಸಲು ಗಂಡುಸಾದ ಸರ್ ವೀನ್ನೀಗೂ ಸಾಧ್ಯವಾಗಲಿಲ್ಲ. ತನ್ನ ಉಡುಗೆ ತೊಡುಗೆಗಳೊಂದಿಗೆ ಅಲಂಕಾರ ಕೋಣೆಗೆ ಹೋಗುವುದನ್ನು ನೀರಿನಲ್ಲಿದ್ದುಕೊಂಡೇ ನೋಡಿದ. ಅವಳು ದಡವನ್ನು ಸೇರಿದ ಮೇಲೆ ಒಂದು ಸಲವಾದರೂ ಅವನ ಕಡೆಗೆ ನೋಡಲಿಲ್ಲ. ಅವಳು ಕೋಪಗೊಂಡಿರಬೇಕೆಂದು ನೆನೆದು ಸರ್ ವೀನ್ನೀಯು ಪೋಷಾಕಿನ ಕೋಣೆಗೆ ಹೋಗಿ ಅರಿವೆಗಳನ್ನು ಹಾಕಿಕೊಂಡು ಹೊರಗೆ ಬಂದು ನೋಡಲು ಅವಳು ಆಗಲೇ ಮಾಯವಾಗಿದ್ದಳು. ನೊಂದ ಮನಸ್ಸಿನಿಂದ ಅವನು ಮೆಲ್ಲನೆ ಮನೆಯನ್ನು ಸಮೀಪಿಸಿದ ಸರ್ ವೀನ್ನೀಯು ಒಬ್ಬನೇ ನಿರುತ್ಸಾಹದಿಂದ ಬರುತ್ತಿರುವುದನ್ನು ತೋಟದಲ್ಲಿದ್ದ ಓಬಾರ್ಡಿ ಮಹಾಶಯಳು ದೂರದಿಂದಲೇ ನೋಡಿ, ಸಾವಾಲ್‌ನ ತೆಕ್ಕೆಯಿಂದ ಮೆಲ್ಲನೆ ಹೊರಬಿದ್ದು, ಹಿಂದಿನ ರಾತ್ರಿ ತಳೆದ ತಾತ್ಸಾರಭಾವನೆಯಿಂದಲೇ, ಅವನ ಹತ್ತಿರಬಂದು " ನಾನು ಹೇಳಲಿಲ್ಲವೆ?. ಬಿಸಿಲು ಮೈಗೆ ಒಳ್ಳೇಯದಲ್ಲವೆಂದು. ಇವೆತ್‌ಳು ಬಳಲಿ ಬಂದವಳೇ ತಲೆನೋವೆಂದು ಕೋಣೆಯಲ್ಲಿ ಬಾಗಿಲನ್ನು ಮುಚ್ಚಿಕೊಂಡು ಮಲಗಿದ್ದಾಳೆ. ಅವಳಮುಖವೆಲ್ಲ ಕಪ್ಪಿಟ್ಟು ಕಣ್ಣುಗಳು ರೇಗಿ ಕೆಂಪಾಗಿದ್ದವು. ಇಡೀ ಹಗಲೆಲ್ಲ ನೀವಿಬ್ಬರೂ ಬಿಸಿಲಿನಲ್ಲಿಯೇ ಅಲೆದಿರಬೇಕು. ಇಲ್ಲವೇ. ಅವಳನ್ನು ನೀವು ಅನೇಕ ವಿಧದಲ್ಲಿ ಬಳಲುವಂತೆ......ಬೇಕು. ಹೀಗೆ ಅವಳನ್ನು ಕಾಡುವುದು ಒಳ್ಳೆಯದಲ್ಲ " ಎಂದು ಕೊಂಚ ಕೋಪದಿಂದಲೇ ಹೇಳಿದಳು.

ರಾತ್ರಿ ಊಟಕ್ಕೆ ಸಹಾ ಅವಳು ಬರಲಿಲ್ಲ. ದಾದಿಯು ಕರೆಯಲು

ಹೋದಾಗ ತನಗೆ ಹಸಿವೆ ಇಲ್ಲವೆಂದೂ ತನ್ನನ್ನು ಯಾರೂ ಪೀಡಿಸಬಾರ ದೆಂದು ಸೂಚಿಸಿದಳು. ಅಂದು ರಾತ್ರಿ ಹತ್ತು ಗಂಟೆಗೆ ಇಬ್ಬರೂ ಪಾರಿಸ್ ನಗರಕ್ಕೆ ಹೊರಟು ಹೋದರು. ಮುಂದಿನ ಗುರುವಾರ ಬರುವುದೆಂದು ನಿಶ್ಚಯವಾಗಿತ್ತು. ಅವರು ಹೋದನಂತರ ಸಾವಾಲ್ ಮಹಾಶಯನ ಸಹ ವಾಸದಲ್ಲಿ,ಮುದುಕಿಯಾದರೂ,ಸುಖವನ್ನು ಕಾಣುತ್ತಲಿದ್ದ ಓಬಾರ್ದಿಯೂ ಅವನನ್ನೇ ನೆನೆಯುತ್ತ ವರಾಂಡಾದಲ್ಲಿ ಕುಳಿತಿದ್ದಳು. ದೂರದಿಂದ ಕೇಳಿ ಬರುತ್ತಿರುವ ವಾದ್ಯಮೇಳದ ಸಂಗೀತ ಅವಳನ್ನು ಆನಂದದಲ್ಲಿ ಮುಳುಗಿಸಿತ್ತು.

ಸಾವಾಲ್‌ನೊಂದಿಗೆ ಕಳೆದ ಒಂದು ದಿನದ ಸುಖದ ಅನುಭವದಿಂದ ಓಬಾರ್ದಿಯು ಬಲು ಆನಂದಭರಿತಳಾಗಿದ್ದಳು. ಅವಳ ಚಪಲವಾದ ಜೂಜುಗಾರರಂತೆ ಇಲ್ಲವೆ ಸೌಕಾಕ್ರೀಡೆಯಲ್ಲಿ ಆಸಕ್ತರಾದವರಂತೆ ಇವಳ ಮನಸ್ಸು ಉದ್ವೇಗಗೊಂಡಿತ್ತು. ಈ ಆವೇಶ ಅವಳನ್ನು ಯಾವ ಸಮಯ ಪರವಶಳಾಗುವಂತೆ ಮಾಡುತ್ತಿತ್ತೊ, ಹೇಳುವುದು ಅಶಕ್ಯ. ಆವೇಶದಲ್ಲಿ ಇವಳ ಮನಸ್ಸು ಅನೇಕ ರೀತಿಯಲ್ಲಿ ವಿಹ್ವಲಗೊಂಡು ಅತಿರೇಕಾವಸ್ಥೆಯಲ್ಲಿ ಉದ್ರೇಕಗೊಂಡು, ಹುಚ್ಚಳಂತೆ ಒದರುವಳೆಂಬುವುದನ್ನೂ ಊಹಿಸಲು ಶಕ್ಯವಿರಲಿಲ್ಲ.

ಓಬಾರ್ದಿಯು ಓರ್ವ ಸಾಮಾನ್ಯ ಬಡವರ ಮನೆಯ ಹೆಣ್ಣು. ಅವಳು ಅತಿ ರೂಪವತಿ.ಅವಳ ಪಾಶವೀ ಸೌಂದರ್ಯ ಅನೇಕ ಶ್ರೀಮಂತರ ಮನಸ್ಸುಗಳನ್ನು ಮುಗ್ಧಗೊಳಿಸಿತ್ತು. ಕೇವಲ ಬಡತನದ ದುಃಖದಲ್ಲಿ ಬೆಂದು, ಕಷ್ಟವನ್ನು ಅನುಭವಿಸಿ, ಕಾಲಕ್ರಮೇಣ ಉನ್ನತ ಸ್ಥಿತಿಗೆ ಬಂದಿದ್ದಳು. ತನ್ನ ರೂಪದ ಉಪಯೋಗವನ್ನು ಅನೇಕರಿಗೆ ನಾನಾ ವಿಧದಲ್ಲಿ ತೃಪ್ತಿಯಾಗುವಂತೆ ವರ್ತಿಸಿ, ಹಣ ಗಳಿಸುತ್ತಿದ್ದಳು. ಈ ವ್ಯವಹಾರದಲ್ಲಿ ಅವಳು ಅತಿ ಚತುರಳೂ, ಕುಶಲಾಗ್ರಣಿಯೂ ಆಗಿದ್ದಳು. ಆದರೆ ತನ್ನ ಹಣದಾಶೆಯನ್ನು ತೀರ ಅವ್ಯವಹಾರದ ರೀತಿಯಲ್ಲಿ ಉಪಯೋಗಿಸಿ ವಿಲಾಸ ಪ್ರಿಯರನ್ನು ಅಸಂತೋಷಗೊಳಿಸುತ್ತಿರಲಿಲ್ಲ. ಹೀಗೆ ವರ್ತಿಸುತ್ತ ಈ ದೊಡ್ಡ ಸ್ಥಿತಿಯನ್ನು ಗಳಿಸಿದ್ದಳು. ಓರ್ವನನ್ನೇ ಅತಿಯಾಗಿ ಪ್ರೀತಿಸುವುದಾಗಲಿ, ಒಬ್ಬನಲ್ಲೇ ಮನಸಿಡುವುದಾಗಲಿ, ಮದುವೆಯೆಂಬ ವ್ಯಾಮೋಹದಲ್ಲಿ ಬೀಳುವುದಾಗಲಿ ಇವಳ ಕೆಲಸವಾಗಿರಲಿಲ್ಲ. ಯಾರಿಗೆ ಯಾವ ಬಗೆಯ

ಸುಖಬೇಕೋ ಅದನ್ನು ಜಾಣತನದಿಂದ ಅರಿತುಕೊಂಡು ಅದರಂತೆ ವರ್ತಿಸುವುದು ಅವಳ ಹುಟ್ಟುಗುಣವಾಗಿತ್ತು.

ತನ್ನ ಈ ಬಗೆಯ ಜೀವನದಲ್ಲಿ ಅನೇಕ ರೀತಿಯ ಜನರ ಪರಿಚಯವನ್ನುಗಳಿಸಿಕೊಂಡಿದ್ದಳು. ಪ್ರಯಾಣಿಕನು ಪ್ರವಾಸದಲ್ಲಿ ನಾನಾ ಬಗೆಯ ಟೇಬಲಗಳ ಮೇಲೆ ಊಟ ಮಾಡುವಂತೆ, ಇವಳು ದಿನವೂ ತನ್ನ ಹತ್ತಿರ ಬರುವ ವಿಲಾಸ ಪ್ರಿಯರ ಇಚ್ಛೆ ಆಕಾಂಕ್ಷೆಗಳಂತೆ ವರ್ತಿಸುತ್ತಿದ್ದಳು. ಆದರೆ ಇವಳೂ ಮನುಷ್ಯಳೇ ಆದುದರಿಂದ ಹೀಗೆ ತನ್ನೆಡೆಗೆ ಬರುತ್ತಿದ್ದ ಮಿತ್ರವೃಂದದವರಲ್ಲಿ ಕೆಲವರು ತೀರ ಹತ್ತಿರದವರೆಂದು ಪರಿಗಣಿಸಿ ಅವರ ಸಹವಾಸದಲ್ಲೇ ಹೆಚ್ಚು ಸಮಯ ಕಳೆಯುತ್ತಿದ್ದಳು. ಈ ಬಗೆಯ ಪ್ರೇಮ ಕೆಲವು ಸಲ ಇವಳನ್ನು ದಾಂಪತ್ಯ ಜೀವನದಲ್ಲಿ ನಿಲ್ಲಬೇಕೆಂಬ ಆಶೆ ಉಂಟು ಮಾಡುತ್ತಿತ್ತು. ಆದರೆ ತಾನು ಅನುಭವಿಸುತ್ತಿದ್ದ ಲಾಲಸ ಹೆಣ್ಣನ್ನು ಮಾನವಂತ ಮನೆತನಕ್ಕೆ ಸೇರಿದವರಾರೂ ಮದುವೆಯಾಗಿ ಬಂಧನಕ್ಕೆ ಒಪ್ಪಲಾರರೆಂದು ಮನದೊಳಗೇ ಕುಗ್ಗಿ ಮರುಗುತ್ತಿದ್ದಳು. ಓಬಾರ್ದಿಯು ಈಗಾಗಲೇ ಅನೇಕ ಶ್ರೀಮಂತರ ತನು, ಮನ, ಧನಗಳನ್ನು ಸೂರೆಗೊಂಡಿದ್ದಳು. ಅಂಥ ವಿಲಾಸ ಪುರುಷರಿಂದ ಹೇರಳ ಸಂಪತ್ತನ್ನು ಪಡೆದು ತಾನೋರ್ವ ಶ್ರೀಮಂತಳಾಗಿದ್ದಳು. ಈ ಬಗೆಯ ಜೀವನವೇ ತನ್ನದಾಗಿರುವಾಗ ತನಗೆ ಆ ಬಗೆಯ ದಾಂಪತ್ಯ ಜೀವನದ ಸುಖ ಈ ಜನ್ಮದಲ್ಲಿ ದೊರೆಯಲಾರದೆಂಬ ನಿಶ್ಚಯಕ್ಕೆ ಬಂದಿದ್ದಳು. ಅಂದೇಕೋ ಇವಳಿಗೆ ಈ ಬಗೆಯ ಕಾಮುಕ ವ್ಯವಹಾರವನ್ನು ಆರಂಭಿಸಿದ ದಿನದಿಂದ ತನ್ನ ಹೆಚ್ಚಿನ ಪ್ರೀತಿಗೆ ಪಾತ್ರರಾದ ವಿಟರನ್ನೆಲ್ಲ ನಭೋ ಮಂಡಲದಲ್ಲಿ ಪ್ರಕಾಶಿಸುತ್ತಲಿದ್ದ ನಕ್ಷತ್ರಗಳನ್ನು ಎಣಿಸುವಂತೆ ನೆನಪು ಮಾಡಿಕೊಂಡಳು.

ಸಾವಾಲ್‌ನು ಅತಿ ಮಮತೆಯವನಾದುದೇಕೆಂದು ತನ್ನೊಳಗೇ ತರ್ಕಿಸಿದಳು. ಅವನ ಅಂದ ಚಂದವಾದ ಮೈಕಟ್ಟು, ಚೆಲುವಾದ ಮುಖ, ಮಧ್ಯಮ ವಯಸ್ಸಾದರೂ ಅವನ ದೇಹದ ಸೌಷ್ಟವ,ಮಾತಿನಲ್ಲಿಯ ನಯ ವಿನಯ, ಸಂಭಾಷಣಾ ಚಾತುರ್ಯ, ಎಲ್ಲಕ್ಕೂ ಮಿಗಿಲಾಗಿ ತನ್ನಲ್ಲಿ ಅವನಿಟ್ಟಿದ್ದ ವಿಶ್ವಾಸ ಮುಂತಾದವುಗಳೇ ಕಾರಣವಾಗಿರಬೇಕೆಂದು ಬಗೆದಳು.

ಹೀಗೆ ಯೋಚಿಸುತ್ತ ಕುಳಿತಿರುವಾಗ ಹಿಂದೆ ಯಾರೋ ಬಂದಂತೆ

ಭಾಸವಾಯಿತು. ಇವೆತ್‌ಳು ಮುಂಜಾನೆ ಧರಿಸಿದ ಪೋಷಾಕಿನಲ್ಲಿಯೇ ತನ್ನ ಕಡೆ ಬರುತ್ತಿರುವುದನ್ನು ಓಬಾರ್ಡಿಯು ಕಂಡು ಆಶ್ಚರ್ಯಗೊಂಡಳು. ಅವಳ ಮುಖ ಬಾಡಿತ್ತು. ಕಣ್ಣುಗಳ ಕೆಂಪು ಇನ್ನೂ ಮಾಯವಾಗಿದ್ದಿಲ್ಲ. ಬಹಳ ದಣಿದಂತೆ ಕಂಡು ಬಂದಳು. ತಾಯಿಯನ್ನು ಸಮೀಪಿಸಿ, "ಅಮ್ಮ ನಿನ್ನೊಡನೆ ಕೊಂಚ ಮಾತನಾಡಬೇಕಾಗಿದೆ" ಎಂದಳು.

ಇವಳೇಕೆ ಇಂದು ಇಷ್ಟು ಸಂಕೋಚದಿಂದ ಮಾತನಾಡುತ್ತಿರುವುದೆಂಬುವುದನ್ನು ತಿಳಿಯಲು ತಾಯಿಯು ಕಾತರಳಾಗಿದ್ದಳು. ತನಗೊಬ್ಬ ಸುಂದರ ಮಗಳಿರುವಳೆಂದು ಹೆಮ್ಮೆ ಪಡುತ್ತಿದ್ದಳು. ಅನೇಕ ಶ್ರೀಮಂತರು ತಮ್ಮ ಹಣವೇ ಸರ್ವಸ್ವವೆಂದು ಅದನ್ನು ಹೆಚ್ಚಿನ ಆಕ್ಕರೆಯಿಂದ ಕಾದಿಟ್ಟು ಪೋಷಿಸುವಂತೆ ಇವಳನ್ನು ಹೆಚ್ಚು ಆರೈಕೆಯಿಂದ ಬೆಳೆಸುತ್ತ ಬಂದಿದ್ದಳು. ಅವಳು ಮುಂದೆ ತನ್ನಂತೆ ಜೀವಿಸುವಳೋ ಇಲ್ಲವೋ ಎಂಬುದರ ವಿಷಯದಲ್ಲಿ ಇವಳಿಗೆ ಸಂಶಯವಿದ್ದರೂ, ಅವಳನ್ನು ಬಹಳ ಎಚ್ಚರದಿಂದ ಆರೈಸತೊಡಗಿದ್ದಳು. ಅವಳಿಗೆ ಸರ್ವ ಸ್ವಾತಂತ್ರ್ಯವನ್ನಿತ್ತಿದ್ದರೂ ಇವೆತ್‌ಳು ಏನು ಮಾಡಿದರೂ ತನ್ನ ತಾಯಿಯನ್ನು ಕೇಳದೇ ಮುಂದರಿಯುತ್ತಿರಲಿಲ್ಲವೆಂಬುದನ್ನು ಅರಿತಿದ್ದಳು. ಇಂತಹ ರೂಪ ಶೀಲಗಳ ಖಣಿಯಾದ ಮಗಳ ಮೇಲೆ ಅವಳಿಗೆ ಅತ್ಯಂತ ವಿಶ್ವಾಸವಿತ್ತು.

ಅದೇ ಹೆತ್ತ ಮಮತೆಯ ಸ್ವರದಲ್ಲೇ "ಹೇಳು ತಾಯಿ, ನಾನು ಕೇಳುತ್ತಲಿದ್ದೇನೆ. ನಿನ್ನ ಮನಸ್ಸಿನ ದುಗುಡವೇನು?" ಎಂದಳು.

ಇವೆತ್‌ಳು ತಾಯಿಯನ್ನು ದಿಟ್ಟಿಸಿ ನೋಡಿದಳು. ತಾಯಿಯ ಮನಸ್ಸು ಏನನನ್ನು ಯೋಚಿಸುತ್ತಿದೆಯೆಂಬುದನ್ನು ತಿಳಿಯಲೋಸುಗ ಅವಳನ್ನೇ ನೋಡುತ್ತ "ಇಂದು ಒಂದು ಪ್ರಸಂಗ ನಡೆದು ಹೋಯಿತು. ಅದೊಂದು ವಿಚಿತ್ರವಾದ ವಿಷಯ." ಎಂದಳು.

"ಅದೇನದು?"

"ಸರ್ ವೀನ್ನೀಯ ಮಹಾಶಯರು ನನ್ನನ್ನು ಪ್ರೀತಿಸುತ್ತಿರುವರೆಂದು ನನಗೆ ಹೇಳತೊಡಗಿದ್ದಾರೆ. ಇಂದು ಅವರು ನನ್ನಲ್ಲಿರುವ ಪ್ರೀತಿ ವಿಶ್ವಾಸದ ಅರಿವನ್ನುಂಟು ಮಾಡಿಕೊಟ್ಟರು."

ಮುಂದೆ ಮಾತನಾಡದೆ ಇವೆತ್‌ಳು ಸುಮ್ಮನಿದ್ದುದರಿಂದ ಇಂತಹ

ಪ್ರಸಂಗಗಳೇನೂ ಅವಳಿಗೆ ಹೊಸತಲ್ಲವಾದುದರಿಂದ 'ಇರಲಿ,ಅವನು ತನ್ನ ಪ್ರೀತಿಯನ್ನು ಹೇಗೆ ವ್ಯಕ್ತಗೊಳಿಸಿದ ?" ಎಂದು ಕೇಳಿದಳು.

ಆಗ ಇವೆತ್‌ಳು ತಾಯಿಯ ಪಾದಗಳ ಹತ್ತಿರ ಕುಳಿತು ಅವಳ ವಿಶ್ವಾಸವನ್ನು ಸಂಪಾದಿಸುವ ನೋಟದಿಂದ, ಕೈಗಳೆರಡನ್ನು ಒಂದೆಡೆ ಸೇರಿಸಿ, ಬಹಳ ದೀನ ವಾಣಿಯಲ್ಲಿ "ಅವರು ನನ್ನನ್ನು ಮದುವೆಯಾಗ ಬೇಕೆಂದು ಕೇಳಿದರು.'' ಎಂದು ನುಡಿದಳು.

ಓಬಾರ್ದಿಗೆ ಆಶ್ಚರ್ಯವೆನಿಸಿತು. ಅವಳು ದಿಗಿಲುಗೊಂಡಳು. ಆದರೂ ಹೊರಗೆ ತನ್ನ ಮನೋಭಾವನೆಯನ್ನು ತೋರಗೊಡದೆ, "ಸರ್‌ವೀನ್ನೀ ಯವರೇ! ನಿನ್ನನ್ನು ಅವರು ಮದುವೆಯಾಗುವರೇ? ಅದು ನಿನ್ನ ಭ್ರಮೆ! ಅವರು ಹಾಗೆ ಹೇಳಿರಲಾರರು" ಎಂದು ಹೇಳಿದಳು.

ಇವೆತ್‌ಳು ತಾಯಿಯನ್ನೇ ದಿಟ್ಟಿಸಿ ನೋಡುತ್ತ ಕುಳಿತಿದ್ದಳು. ಆದರೆ ನಿಶ್ಚಯದ ವಾಣಿಯಿಂದ "ಅದೇಕೆ ತಾಯಿ, ಇದು ನನ್ನ ಭ್ರಮೆಯೇ? ಅವರೇಕೆ ನನ್ನನ್ನು ಮದುವೆಯಾಗಬಾರದು?" ಎಂದ ಕೇಳಿದಳು.

ಓಬಾರ್ದಿಯ ಆವೇಗ ಹೆಚ್ಚಿತು. ಅವಳ ಮುಖದಿಂದ ಮಾತು ಹೊರ ಡಲಿಲ್ಲ. ನಡುಗುವ ದನಿಯಲ್ಲಿ, "ನಿನ್ನ ಊಹೆ ತಪ್ಪು ಮಗಳೇ. ಇದು ಸಾಧ್ಯವಾಗದ ಮಾತು. ನಿನಗೆ ಸರಿಯಾಗಿ ಅರ್ಥವಾಗಿಲ್ಲ. ಅವರ ಶ್ರೀಮಂತಿಕೆ ಎಲ್ಲಿ? ನೀನೆಲ್ಲಿ? ನೀನು ತೀರ ಬಡವಳು." ಎಂದಳು.

ಇವೆತ್‌ಳು ಮೆಲು ದನಿಯಲ್ಲಿ "ಇಲ್ಲವಮ್ಮಾ, ಅವರು ಬಲು ಆತ್ಮೀಯ ವಾಗಿ ಪ್ರೀತಿಸುತ್ತಿರುವರು. ಅವರ ಪ್ರೀತಿಯ ಆಳವೇ ನನ್ನನ್ನು ಮದುವೆ ಯಾಗುವಂತೆ ಮಾಡಿರುವುದು'' ಎಂದಳು.

ಓಬಾರ್ದಿಗೆ ಇವೆತ್‌ಳ ಮೂರ್ಖವಾದ ಕೇಳುವುದು ಬೇಡವಾಗಿತ್ತು. ಸ್ವಲ್ಪ ನಿಷ್ಠುರದ ಸ್ವರದಲ್ಲಿ "ನೀನು ಬೆಳೆದವಳು. ಇದೆಲ್ಲವೂ ನಿನಗೆ ಪೂರ್ಣ ತಿಳಿಯುವ ಜ್ಞಾನ ಉದಯವಾಗಿದೆಯೆಂದು ನಾನು ಭಾವಿಸಿದ್ದೆ. ನಿನಗೆ ಈಗಾಗಲೇ ಜನರ ನಡೆನುಡಿಗಳ ಪರಿಚಯವಾಗಿದೆಯೆಂದು ತಿಳಿದಿದ್ದೆ. ಸರ್‌ವೀನ್ನೀಯವರು ಪ್ಯಾರಿಸ್‌ನಗರದ ಓರ್ವ ಅಗರ್ಭ ಶ್ರೀಮಂತರು. ರಸಿಕರು. ಅವರು ತಮ್ಮ ಶ್ರೀಮಂತಿಕೆಗೆ ಮತ್ತು ಅಂತಸ್ತಿಗೆ ಸರಿಯಾದವಳನ್ನೇ ಮದುವೆಯಾಗುವರು. ಅವರು ಮದುವೆಯ ಆಶೆಯನ್ನು ಸುಮ್ಮನೇ

ತೋರಿಸಿರುವರು. ನಿನ್ನ ಶರೀರ ಸುಖ ಪಡೆಯಲು, ಅವರು ನಿನಗೆ ಈ ಬಗೆಯ ಬಲೆ ಬೀಸಿರುವರು. ಅವರ ಈ ಮದುವೆಯ ಮಾತು ಸತ್ಯವೆಂದು ನಾನಂತೂ ನಂಬಲಾರೆ..." ಎಂದು ಮುಂದೆ ಏನನ್ನೋ ಹೇಳಲು ಹೋಗಿ ಮಾತು ಮುಂದುವರಿಸದೆ ಕೊಂಚ ಸುಮ್ಮನಿದ್ದು ಮತ್ತೆ "ಮಗೂ ಹೊತ್ತು ಬಹಳ ಆಗಿದೆ. ನೀನು ತುಂಬಾ ದಣಿದಿರುವೆ. ಹೋಗಿ ಮಲಗಿಕೋ" ಎಂದು ಹೇಳಿದಳು.

ಮುಗುಧೆಯಾದ ಇವೆತ್‌ಳಿಗೆ ತನ್ನ ಅಜ್ಞಾನದ ಅರಿವು ಆಗತೊಡಗಿತು. ತಾನು ಇನ್ನು ಮಾತನಾಡುವುದು ಒಳಿತಲ್ಲವೆಂದು ನೆನೆದು "ಆಗಲಿ ಹೋಗಿ ಮಲಗುವೆನಮ್ಮ" ಎಂದು ಹೇಳಿ ಎದ್ದುನಿಂತು ತಾಯಿಗೆ ಚುಂಬನವಿತ್ತು ಮೆಲ್ಲಗೆ ಹೋಗುವ ಹೊತ್ತಿಗೆ ಓಬಾರ್ದಿಯು "ನಿನ್ನ ತಲೆ ನೋವು ಹೋಗಿದೆ?" ಎಂದು ಕೇಳಿದಳು.

"ನನಗೆ ತಲೆ ನೋವು ಆಗಿರಲಿಲ್ಲ. ಈ ಯೋಚನೆಯೇ ನನ್ನ ತಲೆಯನ್ನು ಕೆಡಿಸಿತ್ತು" ಎಂದು ಇವೆತ್ ಹೇಳಿದಳು.

"ಮತ್ತೆ ಅದನ್ನೇ ನೆನೆಯಬೇಡ ಮಗು. ಇನ್ನು ಮೇಲೆ ಅವರ ಜತೆಯಲ್ಲಿ ಹೆಚ್ಚು ಸಮಯ ಒಬ್ಬಳೇ ಇರಬೇಡ. ಅವರು ನಿನ್ನನ್ನು ಎಂದಿಗೂ ಮದುಯಾಗಲಾರರು. ನಾನಾಗಲೇ ಹೇಳಿದಂತೆ ನಿನ್ನ ಮುಗ್ಧತೆಯನ್ನು ಕಂಡು ನಿನ್ನನ್ನು ಮದುವೆಯಾಗುವೆನೆಂದು ಸುಳ್ಳು ಹೇಳಿ ಮೋಸಗೊಳಿಸುತ್ತಿರುವರು. ಇದು ನನ್ನ ಅನುಭವದ ಮಾತು. ವಿಶ್ವಾಸವಿಟ್ಟು ಕೇಳು. ಎಚ್ಚರದಿಂದ ನಡೆದುಕೋ ತಿಳಿಯಿತೇ ?" ಎಂದು ಮಗಳನ್ನು ಎಚ್ಚರಿಸಿದಳು. "ಆಗಲಮ್ಮಾ" ಎಂದು ಹೇಳಿ ಇವೆತ್ಳು ಮುಂದೆ ಸರಿದು ತನ್ನ ಕೋಣೆಗೆ ಹೋದಳು. ಓಬಾರ್ದಿಯು ತನ್ನ ಯೋಚನಾ ಸಾಮ್ರಾಜ್ಯದಲ್ಲಿ ಮೈಮರೆತು ಅರ್ಧ ನಿದ್ರೆಯಲ್ಲಿದ್ದಳೆಂದರೂ ತಪ್ಪಲ್ಲ. ಅನೇಕ ವರುಷಗಳಿಂದ ಸಂತೋಷ, ಸಂಭ್ರಮ, ವಿಲಾಸಮಯ ಜೀವನವನ್ನು ಅನುಭವಿಸಿ ಸುಖ ಸಂಪತ್ತುಗಳೊಂದಿಗೆ ಆನಂದದಲ್ಲಿದ್ದ ಓಬಾರ್ದಿಗೆ ದುಃಖವೆಂಬುದು ಹೊಸದು. ಅದು ಅವಳ ಸಮೀಪ ಬರುವುದಕ್ಕೆ ಅಂಜುತ್ತಿತ್ತೆಂದರೂ ಸರಿಯೆ. ಅವಳು ತನ್ನ ಸುಖದ ಪರಿವೆಯಲ್ಲಿ ಮಗ್ನಳಾಗಿದ್ದಳೇ ಹೊರತು, ಮುಂದೆ ಬಾಳಿ ಬದುಕ ಬೇಕಾಗಿರುವ ಯುವತಿಯಾದ ಇವೆತ್‌ಳ ಗತಿ

ಯೇನೆಂಬುವ ಯೋಚನೆ ಅವಳನ್ನು ಒಂದು ನಿಮಿಷವಾದರೂ ತೊಂದರೆ ಗೊಳಿಸಲಿಲ್ಲ. ಮುಂದೆ ಬರಲಿರುವ ದುಃಖ ಪ್ರಸಂಗಗಳನ್ನು ಕುರಿತು ಯೋಚಿಸುವ ಗೋಜಿಗೆ ಹೋಗುವ ಸ್ವಭಾವ ಅವಳವಾಗಿದ್ದಿಲ್ಲ. ಕಷ್ಟ ಬಂದಾಗ ಎದುರಿಸಿದರಾಯಿತೆಂಬುದೇ ಅವಳ ಧ್ಯೇಯವಾಗಿತ್ತು. ಯಾವ ಶ್ರೀಮಂತನೂ ಇವೆತ್‌ಳನ್ನು ಮದುವೆಯಾಗಲಾರನೆಂದೂ, ಅವಳ ರೂಪ ಲಾವಣ್ಯ ಸುಗುಣಗಳಿಗೆ ಮರುಳಾಗಿ ಯಾವನಾದರೂ ಶ್ರೀಮಂತ ಮದುವೆ ಯಾದರೆ ಆ ದಾಂಪತ್ಯ ಭಾಂಧವ್ಯ, ಬಹಳ ದಿನಗಳವರೆಗೆ ಉಳಿಯಲಾರ ದೆಂದು ಅವಳ ತರ್ಕವಾಗಿತ್ತು. ಮಗಳ ಮುಂದಿನ ಯೋಚನೆ ಅವಳನ್ನೂ ಹೆಚ್ಚಾಗಿ ವೇಧಿಸುತ್ತಿರಲಿಲ್ಲ. ತನ್ನ ಸ್ವಂತ ಸುಖ ಸಂತುಷ್ಟಿಗಳ ಕಡೆ ಅವಳ ಹೆಚ್ಚಿನ ಲಕ್ಷ್ಯವಿತ್ತು. ಮನೆಗೆ ಬರುವ ಶ್ರೀಮಂತ ಮಿತ್ರರ ಆತಿಥ್ಯ ದಲ್ಲಿಯೇ ಅವಳ ಸಮಯ ಜಾರಿ ಹೋಗುತ್ತಿತ್ತು.

ಇವೆತ್‌ಳು ತನ್ನಂತೆ ಸುಖಮಯ, ವಿಲಾಸಮಯ ಜೀವನವನ್ನೇ ಸಾಗಿಸುವಳೆಂದೂ, ಸಮಯ ಬಂದಾಗ ಅವಳ ಜೀವನವು ಹೊಂದಿಕೊಂಡು ಸರಿ ಹೋಗುವುದೆಂದೂ, ಓಬಾರ್ದಿಯು ಊಹಿಸಿದ್ದಳು. ಆದರೆ ಇಂದು ಅವಳು ವರ್ತಿಸಿದ ರೀತಿಯು ತಾಯಿಗೆ ಹೆಚ್ಚು ಆಶ್ಚರ್ಯವನ್ನುಂಟು ಮಾಡಿತು. ಇಂತಹ ಪ್ರಶ್ನೆಗಳನ್ನು ಕೇಳುವಳೆಂದು ಅವಳು ನೆನೆದಿರಲಿಲ್ಲ. ಇಂತಹ ಮಾರ್ಮಿಕವಾದ, ತರ್ಕಬದ್ಧವಾದ ಪ್ರಶ್ನೆಯನ್ನು ತನ್ನನ್ನು ಸಂಕೋಚವಿಲ್ಲದೆ ಕೇಳುವಳೆಂದು ಓಬಾರ್ದಿಯು ಕನಸಿನಲ್ಲಿಯೂ ಊಹಿಸಿ ರಲಿಲ್ಲ. ಹೊರಗಿನ ವ್ಯವಹಾರವನ್ನು ಏನೂ ಅರಿಯಳೆಂದು ಭಾವಿಸಿ ಇಲ್ಲಿಯ ವರೆಗೆ ಅಲಕ್ಷ್ಯದಿಂದ ಮುಂದರಿದುದು ತಪ್ಪೆಂದು ತನ್ನೊಳಗೆ ತಾನೇ ತರ್ಕಿ ಸಿದ್ದಳು. ಎದುರಾಡಿ ಮನೆಯಲ್ಲಿ ಮನಸ್ತಾಪದ ಬಿರುಗಾಳಿ ಉಂಟುಮಾಡು ವಳೆಂದು ನೆನೆದಿರಲಿಲ್ಲ. ತನಗೆದುರು ನಿಂತು ಮಾತನಾಡುವ ಶಕ್ತಿಯು ಇವೆತ್‌ಳಲ್ಲಿ ಬೆಳೆದುದು ಅವಳಿಗೆ ಆಶ್ಚರ್ಯವನ್ನುಂಟು ಮಾಡಿತ್ತು.

ಹೆಚ್ಚು ಅನುಭವವುಳ್ಳ ಓಬಾರ್ದಿಯು, ಸರ್ ವೀನ್ನೀಯು ಆಡಿದ ಮಾತುಗಳು ವಿಶ್ವಾಸನೀಯವಲ್ಲ ವೆಂದು, ಇವೆತ್‌ಳ ಜನ್ಮ ರಹಸ್ಯ ವನ್ನು, ಅವಳಿದ್ದ ವಾತಾವರಣವನ್ನೂ ಅರಿತ ಅವನು ಸುಮ್ಮನೆ ಮೋಸದ ನುಡಿಗಾಗಿ ಮದುವೆಯಾಗುವೆನೆಂದು ಹೇಳಿರಬೇಕೆಂದು ನೆನೆವಳು. ಇನರಿ

ಬ್ಬರ ಸ್ನೇಹ ಇಷ್ಟು ಬಲಗೊಂಡು ಕೇವಲ ಕಾಮುಕ ಪ್ರೇಮದಲ್ಲಿ ಕೊನೆಗೊಳ್ಳದೆ, ಮದುವೆಯ ನಿಶ್ಚಯದಲ್ಲಿ ಕೊನೆಗೊಳ್ಳುವುದೆಂದು ನೆನೆದಿರಲಿಲ್ಲ. ಇಲ್ಲಿಯ ವರೆಗೆ ತನಗೆ ಆದ ಅನುಭವವು ಇಂದು ಸುಳ್ಳಾಗುವ ಸಮಯ ಬಂದೊದಗಿತೆಂದು ಅವಳು ಚಿಂತೆಗೊಳಗಾದಳು. ಇಂತಹ ವಿಲಾಸಿಗಳ ಮನೋಭಾವವನ್ನು ಚೆನ್ನಾಗಿ ಅರಿತ ಇವಳು ಇವೆತ್‌ಳ ಮಾತುಗಳಲ್ಲಿ ವಿಶ್ವಾಸವಿಡಲಿಲ್ಲ. ಆದುದರಿಂದಲೇ ಅವಳು ಆಶ್ಚರ್ಯದಿಂದ "ಸರ್ ವೀನ್ನೀಯು ಇವೆತ್‌ಳನ್ನು ಮದುವೆಯಾಗುವನೇ? ಇದು ಅಸಂಭವ" ಎಂದು ಮನದಲ್ಲಿಯೇ ನುಡಿದುಕೊಂಡು ಸುಮ್ಮನಾದಳು.

"ಸರ್ ವೀನ್ನೀಯು ಇಂತಹ ಅಭಿವಚನವಿತ್ತಿರಲಾರನು. ಅವನು ಈ ಬಗೆಯ ತಪ್ಪು ಎಂದಿಗೂ ಮಾಡಲಾರ. ಇದು ಕೇವಲ ಇವೆತ್‌ಳ ಮಾನಸಿಕ ಊಹೆ. ಅವಳ ಅನನುಭಾವದ ವರ್ತನೆ. ಇದರಲ್ಲೇನಾದರೂ ಮೋಸವಿದೆಯೆ? ದೊಡ್ಡವರ ವಂಶಜನಾದ ಸರ್ ವೀನ್ನೀಯಂತಹ ಶ್ರೀಮಂತನು ಹೀಗೆ ಮೋಸ ಮಾಡುವ ಗೋಜಿಗೆ ಹೋಗುವನೆ? ಇಂತಹ ವಿಲಾಸ ಪ್ರಿಯನು ಮದುವೆಯೆಂಬ ಬಂಧನಕ್ಕೆ ಒಳಗಾಗುವನೆ? ಆದರೆ ಇವೆತ್‌ಳು ತನ್ನ ನಿರ್ಧಾರವನ್ನು ಹೇಳುವಾಗ ಅವಳ ಮುಖದಲ್ಲಿ ಕಂಡು ಬಂದ ನಿಶ್ಚಯದ ನುಡಿಗೇನನ್ನಬೇಕು?" ಎಂದು ಓಬಾರ್ದಿಯು ತನ್ನೊಳಗೇ ಯೋಚಿಸತೊಡಗಿದಳು.

ಕೊಂಚ ಸಮಯ ಸುಮ್ಮನೇ ಆಕಾಶವನ್ನೇ ನೋಡುತ್ತ ಕುಳಿತಳು. ಅನೇಕ ರೀತಿಯ ಯೋಚನೆಗಳು ಅವಳ ಮನಸ್ಸನ್ನು ಕಲಕಿಸಿದವು. ಎಷ್ಟು ಯೋಚಿಸಿದರೂ ಆ ಸಮಸ್ಯೆ ಬಗೆಹರಿಯುವಂತಿರಲಿಲ್ಲ. "ಆಯಿತು. ಮುಂದೆ ಇವರಿಬ್ಬರ ಮೇಲೆ ನನ್ನ ದೃಷ್ಟಿ ಇರಲೇಬೇಕು. ಅವರನ್ನು ನೋಯಿಸದೇ, ಅವರಿಗೆ ತಿಳಿಯದಂತೆ ಈ ಬಾಂಧವ್ಯವನ್ನು ಹೋಗಲಾಡಿಸಲು ಯತ್ನಿಸುವೆನು. ಸಮಯವನ್ನರಿತು ಸರ್ ವೀನ್ನೀಯನ್ನೇ ಎಚ್ಚರಿಸುವೆನು. ನನ್ನ ಎಚ್ಚರದ ನುಡಿಗಳು ಅವನ ಮೇಲೆ ಕೆಲಸ ಮಾಡಬಲ್ಲವು. ನನ್ನ ಮಾತಿನ ನಿಜಾರ್ಥವನ್ನು ತಿಳಿಯುವ ಜಾಣತನ ಅವನಲ್ಲಿದೆ" ಎಂದು ನಿರ್ಧರಿಸಿ, ತನ್ನ ಪ್ರಿಯನಾದ ಸಾವಾಲ್‌ನನ್ನು ನೆನೆಯುತ್ತ ಆ ಬಯಲಿನಲ್ಲಿಯೇ ಕುಳಿತು ಮೈಮರೆತು ಸ್ವಪ್ನಾವಸ್ಥೆಯಲ್ಲಿ ಹೆಚ್ಚು ಹೊತ್ತು ಕಳೆದಳು.

ಸುಂದರವಾದ ಸಾವಾಲ್‌ನ ಮುಖ, ಅವನ ಭವ್ಯ ಆಕೃತಿ, ಚೆಲುವಾದ ದೇಹಾಕೃತಿ, ಅವನ ತೆಕ್ಕೆಯಲ್ಲಿ ತನಗಾಗುತ್ತಿದ್ದ ಆನಂದ, ಎಲ್ಲವನ್ನೂ ನೆನೆದು ಸುತ್ತಲಿನ ವಾತಾವರಣವನ್ನೇ ಮರೆತಳು. ಅವಳು ಹುಚ್ಚಳಂತೆ ತನ್ನೆರಡು ತೋಳುಗಳನ್ನು ಹರವಿ ಬರಿಗಾಳಿಯನ್ನೇ ತಬ್ಬಿಕೊಂಡು, ಮುಂದಿದ್ದ ಶೂನ್ಯ ಪ್ರದೇಶವನ್ನು ಸಾವಾಲ್‌ನೆಂದು ಬಗೆದು ಮುದ್ದುಗಳ ಮಳೆಗರೆಯುತ್ತಾ "ಪ್ರಿಯ ಸಾವಾಲ್, ಪ್ರಿಯ ಸಾವಾಲ್" ಎಂದು ಗೊಣಗಿಕೊಳ್ಳುತ್ತ, ಅಲ್ಲಿಯ ಸುಖಾಸನದ ಮೇಲೆ ಒರಗಿದಳು. ಅಲ್ಲಿಯೇ ಹೆಚ್ಚು ಹೊತ್ತು ನಿದ್ರಿಸಿರಬೇಕು.

---

## ೩

# ತ್ರಿಳಿವಳಿಕೆ

ಇವೆತ್‌ಳಿಗೂ ಅಂದು ನಿದ್ದೆ ಬರಲೇ ಇಲ್ಲ. ತನ್ನ ಕೋಣೆಗೆ ಹೋಗಿ ಕಿಟಕಿಯ ಬಾಗಿಲುಗಳನ್ನು ತೆರೆದಿಟ್ಟು ಸುಮ್ಮನೇ ಆಕಾಶದತ್ತ ನೋಡುತ್ತ ಕುಳಿತಳು. ದುಃಖಾಶ್ರುಗಳಿಂದ ಅವಳ ದೃಷ್ಟಿ ಮಂದವಾಯಿತು. ಶೋಕ, ದುಃಖ, ಸಂತಾಪವನ್ನೇ ಅರಿಯದ ಅವಳ ಜೀವನ ಇಂದು ಪರಿತಾಪದಿಂದ ಬೆಂದು ಹೋಗಿತ್ತು. ಯೌವ್ವನದ ಭರದಲ್ಲಿ, ನೂತನತೆಯ ಸೆಳವಿನಲ್ಲಿ, ಸುಖದ ಪದರಿನಲ್ಲಿ, ಸಂತಸದ ಸಂಭ್ರಮದಲ್ಲಿ ಅವಳು ಆನಂದದಿಂದ ಕಾಲ ಕಳೆದಿದ್ದಳು. ನೋವು ಸಂಕಟಗಳ, ಅನುತಾಪ ದುಃಖಗಳ, ಅರಿವು ಅವಳಿಗಾಗಿರಲಿಲ್ಲ. ಜೀವನದ ಸಮಸ್ಯೆಗಳೇನೆಂಬುದರ ಅರಿವಿಲ್ಲದೆ ತೂಗುತೊಟ್ಟಿಲ ಮಗುವಿನಂತೆ, ಸದಾ ಹಿಗ್ಗಿನ ಭರದಲ್ಲಿಯೇ, ಕಾಲಕಳೆದ ಅವಳಿಗೆ ಇದೊಂದು ನೂತನ ನೋವಿನ ಅನುಭವವಾಗಿತ್ತು.

ಇತರ ಯುವತಿಯರಂತೆ ಅವಳ ಜೀವನವೇಕೆ ಹಗುರವಾಗಲೊಲ್ಲದು? ತನಗೇಕೆ ಇಷ್ಟು ಬೇಗ ಈ ಬಗೆಯ ಸಮಸ್ಯೆಗಳು ಬಂದು ದುಃಖವನ್ನುಂಟು ಮಾಡಬೇಕು ? ಹಿರಿಯ ಹೆಣ್ಣಿನ ಜೀವನಕ್ಕೆ ಬಂದೊದಗುವ ತೊಡಕು, ಸಂಕಟಗಳೇಕೆ ಅವಳ ಹರುಷಮಯ ಜೀವನಕ್ಕೆ ವಿಷಾದವನ್ನು ತಂದೊಡ್ಡ ಬೇಕು ? ಇದೆಲ್ಲವೂ ಅವಳಿಗೆ ಒಗಟಿನಂತೆ ಕಂಡುಬಂತು.

ಈಗಾಗಲೇ ಇವೆತ್‌ಳು ನಾನಾ ಬಗೆಯ ಜನರ ಪರಿಚಯ ಮಾಡಿಕೊಂಡಿದ್ದಳು. ವಿವಿಧ ರೀತಿಯ ಅನುಭವವನ್ನು ಪಡೆದಿದ್ದಳು. ತನ್ನ ತಾಯಿಯ ವಿಲಾಸಮಯ ಜೀವನದ ಕ್ರಮದಲ್ಲಿ ಅವಳ ಹತ್ತಿರ ಬರುವ ಜನರ, ಮತ್ತು ತಮ್ಮ ಮನೆಯಲ್ಲಿ ನಡೆಯುವ ನಾನಾ ಬಗೆಯ ನೃತ್ಯ, ಗಾನ, ಆಟಪಾಟಗಳಿಗೆಂದು ಬರುವ ಶ್ರೀಮಂತ ಸಮವಯಸ್ಸಿನ ತರುಣ ತರುಣಿಯರ ಪರಿಚಯವಾಗಿತ್ತು. ಇದರಿಂದ ಅವಳಿಗೆ ಕಾಮ ವ್ಯಾಪಾರದ ರಹಸ್ಯ ಜೀವನದ ಅನುಭವ ಆಗಿರಲಿಲ್ಲ. ಈ ಬಗೆಯ ವಿಲಾಸಮಯ ಜೀವನ

ದಲ್ಲಿ ಕೊಂಚ ತಿರಸ್ಕಾರವೂ ಮನೆಮಾಡಿಕೊಂಡಿತ್ತು. ತನ್ನ ತಾಯಿಯ ಸಹವಾಸವಲ್ಲಿ ಅವಳು ತಿಳಿವ ಹೆಣ್ಣಿನಂತೆ ವರ್ತಿಸಿವರೂ ಅವಳಿಗೆ ನಿಜವಾಗಿಯೂ ಇವುಗಳಾವೂ ತಿಳಿದಿರಲಿಲ್ಲ. ಸಹಜ ವಾಕ್ಚಾತುರ್ಯಗಳೂ, ನಿರ್ಭಿಡಿಯ ಸ್ವಭಾವದವಳಾದ ಇವೆತ್‌ಳು ತಮ್ಮ ಮನೆಗೆ ಬಂದ ಮಿತ್ರ ರೊಂದಿಗೆ ಅತಿ ಸರಳತನದಿಂದ ವರ್ತಿಸುವ ವಿಧಾನ ಅನೇಕರನ್ನು ಬೆರಗು ಗೊಳಿಸಿತ್ತು. ಆದರೆ ಈ ಬಗೆಯ ವಿಲಾಸ ಜೀವನದಲ್ಲಿ ಅನುಭವಿಯಾದ ಓಬಾರ್ದಿಯಂತೆಯೇ ಇವೆತ್‌ಳೂ ವಿಲಾಸ ಪ್ರಿಯಳೆಂದು ಅನೇಕರು ತಿಳಿದು ಮೋಸಹೋಗಿದ್ದರು. ಸರ್ ವಿನ್ನೀಯು ಮಾತ್ರ ಮೋಸಹೋಗಿ ರಲಿಲ್ಲ. ಇವೆತ್‌ಳು ನಿಜವಾಗಿಯೂ ಸತ್ಪ್ರವರ್ತನಳೆಂದು ಅವನು ತಿಳಿದಿದ್ದ. ಆದುದರಿಂದಲೇ ಅವಳನ್ನು ಪ್ರೀತಿಸುವ ಸಾಹಸಕ್ಕೆ ಹೋಗಿದ್ದ. ಇದು ಮದುವೆಯ ಸಂಬಂಧಕ್ಕೆ ಎಳೆದುಕೊಂಡು ಹೋಗುವುದೆಂದು ಅವನು ಭಾವಿಸಿರಲಿಲ್ಲ. ಅವಳನ್ನು ತನ್ನ ಮೋಹಜಾಲದಲ್ಲಿ ಕೆಡವಿಕೊಂಡು ಅವ ಳೊಂದಿಗೆ ದೇಹ ಸುಖವನ್ನು ಮಾತ್ರ ಪಡೆದು, ನಂತರ ಭ್ರಮರದಂತೆ ಮತ್ತೊಂದು ಹೂವನ್ನು ಹುಡುಕುವ ಕುಹಕ ಯೋಚನೆ ಅವನದಾಗಿತ್ತು.

ಇತ್ತ ಇವೆತ್‌ಳ ಕಲ್ಪನೆಯೇ ಬೇರೆ ರೀತಿಯದಾಗಿತ್ತು. ಓರ್ವ ಕಲೋಪಾಸಿಯ ಹತ್ತು ವರುಷದ ಮಗುವು ಚಿತ್ರಕಲೆಯ ಬಗ್ಗೆ, ಇಲ್ಲವೆ ಸಂಗೀತದ ಬಗ್ಗೆ ಅಭಿರುಚಿ ತೋರುವಂತೆ, ಓಬಾರ್ದಿಯಂತಹ ಕಾಮುಕ ವಿಲಾಸಿನಿಯ ಮಗಳಾದ ಇವೆತ್‌ಳೂ ಪ್ರೇಮ ಪ್ರೀತಿಗಳ ಬಗ್ಗೆ ಅಭಿರುಚಿ ತೋರುತ್ತಿದ್ದಳು. ತನ್ನ ಜೀವನವು ಇತರರಂತೆ ಸರಳ, ಮತ್ತು ಸುಲಲಿತವಾಗಬೇಕೆಂದು ಬಗೆದಿದ್ದಳು. ಪಾಪದ ಕಳಂಕ ತನ್ನ ಜೀವನಕ್ಕೆ ಅಂಟಿಕೊಂಡಿದೆಯೆಂದು ತಿಳಿದಿರಲಿಲ್ಲ.

ಇತರರು ತನ್ನ ತಾಯಿಯ ಕೈಯನ್ನು ಮುದ್ದಿಸುವುದು ಕೇವಲ ಮರ್ಯಾದೆಗಾಗಿಯೆಂದು ಅವಳು ತಿಳಿದಿದ್ದಳು. ತಮ್ಮ ಮನೆಗೆ ಬಂದ ಶ್ರೀಮಂ ತರು, ರಾಜಕುಮಾರರು, ಉನ್ನತೋದ್ಯೋಗಿಗಳು, ಎಲ್ಲರೂ ದೊಡ್ಡವರೆಂದೂ, ಮಾನ ಮರ್ಯಾದೆಯುವರೆಂದೂ ಅವಳು ಭಾವಿಸಿದ್ದಳು. ತಾವೂ ಅವರಂ ತೆಯೇ ಶ್ರೀಮಂತರೆಂದೂ, ಸರಿಸಮಾನತೆಯ ಅಂತಸ್ತು ತಮ್ಮದಾಗಿರುವು ದರಿಂದ ಆದರ ವಿಶ್ವಾಸಗಳಿಂದಲೇ ತನ್ನ ಮನೆಗೆ ಅವರು ಬರುತ್ತಿರುವ

ರೆಂದು ಊಹಿಸಿದ್ದಳು. ತನ್ನ ಮನೆಯು, ಇವರ ಹಣದಿಂದ ಪ್ರೇಮ ಕಾಮು ಗಳನ್ನು ಕೊಳ್ಳಲು ಬಂದ ವಿಲಾಸ ಗೃಹವೆಂದು ಅವಳಿಗಿನ್ನೂ ತಿಳಿದಿರಲಿಲ್ಲ. ದಿನವೂ ದೂರ ದೇಶದ ರಾಜಕುಮಾರರು, ಹಿರಿಯ ಶ್ರೀಮಂತರು ತಂಡ ತಂಡವಾಗಿ ತಮ್ಮ ಮನೆಗೆ ಬಂದು ಆಟಪಾಟಗಳಲ್ಲಿ ಮಗ್ನರಾಗುವುದು ಒಂದು ಮರ್ಯಾದೆಯು, ಸಂಪ್ರದಾಯದ ವರ್ತನೆ, ದಿನದ ಸಾಮಾನ್ಯವಾದ ನಡತೆಯೆಂದು ಈ ಮುಗ್ಧಳು ಭಾವಿಸಿದ್ದಳು. ಈ ಎಲ್ಲ ವಿಲಾಸ ಜೀವನ, ನೃತ್ಯ, ಗಾನ, ಊಟ ಸಮಾರಂಭಗಳು ಅವರನ್ನು ಸಂತೋಷಗೊಳಿಸಿ, ತನ್ನನ್ನೂ ಸೂಳೆ ವೃತ್ತಿಗೆ ಎಳೆಯಲು ತನ್ನ ತಾಯಿಯು ಹೂಡಿದ ಒಂದು ಗುಪ್ತ ಯೋಜನೆಯೆಂಬುದು ಇವೆತ್‌ಳು ತಿಳಿದಿರಲಿಲ್ಲ. ನೃತ್ಯ, ಗಾನ, ಸಭೆ ಗಳಿಗೆ ಬರುತ್ತಿದ್ದ ಅನೇಕ ಸ್ತ್ರೀಯರು ನಾಚಿಕೆಗೆಟ್ಟ ಸೂಳೆಯರೆಂದು ಅವಳು ಮನಗಂಡಿರಲಿಲ್ಲ.

ಇವರ ಜತೆಯಲ್ಲಿ ಕಲ್ಪನಾ ವಿಲಾಸದಲ್ಲಿ ಮೈಮರೆತು ಭೃಂಗದ ಹಿಡಿ ತದಲ್ಲಿ ಮೈಮರೆತು ಸಿಕ್ಕುಬಿದ್ದ ಹೂವಿನಂತೆ ಅವಳ ಜೀವನವಾಗಿತ್ತು ಮುಂದೇನು ಎಂಬ ಯೋಚನೆ ಅವಳಿಗಿರಲಿಲ್ಲ. ಸುತ್ತಲೂ ಸುಖವೇ: ಆನಂದ ಸಾಮ್ರಾಜ್ಯದಲ್ಲಿ ನೋವು, ದುಃಖಗಳ ಕಲ್ಪನೆಯೇ ಅವಳಿಗೆ ಆಗುತ್ತಿರಲಿಲ್ಲ. ತಮ್ಮ ಮನೆಯಲ್ಲಿ ನಡೆಯುತ್ತಿರುವ, ಅವಳು ಅನುಸರಿಸು ತ್ತಲಿದ್ದ ಹಾದಿ ತಪ್ಪೆಂದು ತಿದ್ದಬೇಕಾದ ತಾಯಿಯೇ ಸುಮ್ಮನಿರುವಾಗ ಏನೂ ಅರಿಯದ ಇವಳಿಗೆಂತು ತಿಳಿಯಬೇಕು?

ಆದರೆ ಅಂದು ಸರ್ ಪೀನ್ನೀಯೊಂದಿಗೆ ನಡೆದ ಮಾತುಗಳಿಂದ ಅವ ಳಲ್ಲಿ ನೂತನವಾದ ಅರಿವು ಉಂಟಾಯಿತು. ಈ ಹೊಸ ತಿಳುವಳಿಕೆಯಿಂದ ಅವಳಿಗೆ ಗಂಡಸರ ಪಶುವೃತ್ತಿ, ಅವರಲ್ಲಿ ಮನೆ ಮನೆಮಾಡಿಕೊಂಡ ಕೃತ್ರಿಮ ಪ್ರೇಮ, ಮುಗ್ಧ ಸ್ತ್ರೀಯರನ್ನು ಮೋಸಗೊಳಿಸಿ ಅವರ ಬಾಳನ್ನು ಹಾಳು ಮಾಡುವ ಅವರ ನೀಚತನ, ಸ್ವಾರ್ಥ ಸಾಧನೆ, ಇವುಗಳೆಲ್ಲವೂ ಸಾವಕಾಶವಾಗಿ ಅರಿವಾಗತೊಡಗಿದವು. ತನ್ನ ನಿರ್ಣಯ ತಪ್ಪೇನೋ ಯೆಂಬಂತೆ ಮೊದ ಮೊದಲಿಗೆ ಎನಿಸಿದರೂ ಸ್ವಲ್ಪ ಶಾಂತವಾಗಿ ಯೋಚಿಸಿ ದಂತೆಲ್ಲ ತನ್ನ ನಿರ್ಣಯ ನಿಜವಿರಬಹುದೆಂಬ ಆಶೆಯುಂಟಾಯಿತು. ಪೆಟ್ಟು ತಿಂದು, ಬೇಟೆಗಾರನ ಹಿಡಿತದಿಂದ ತಪ್ಪಿಸಿಕೊಂಡು ಮನೆ ಸೇರಿದ ಹರಿಣ

ದಂತೆ ಅವಳು ಬಿಸಿಯುಸಿರೆಳೆಯುವುದೊಂದು ಕಡೆ ಉಳಿದರೆ, ಆ ನೋವಿನಿಂದ ತನಗುಂಟಾದ ಆತ್ಮ ವಿಕಾಸದ ಸಂತೋಷವೊಂದು ಕಡೆ ಅವಳಲ್ಲಿ ಉತ್ಸಾಹವನ್ನುಂಟು ಮಾಡಿತ್ತು. ಸರ್‌ಪೀನ್ನೀಯು ಆಡಿದ ಆ ಹುಚ್ಚು ಮಾತುಗಳು ಇನ್ನೂ ಅವಳ ಕಿವಿಯಲ್ಲಿ ಗುಂಯ್‌ಗುಡುತ್ತಿದ್ದವು. "ನಮ್ಮೀರ್ವರ ನಡುವೆ ಮದುವೆಯ ಪ್ರಶ್ನೆಯೇ ಬರಲಾರದು. ನಮ್ಮೀರ್ವರ ಪ್ರೇಮ ವ್ಯವಹಾರವು ಸ್ನೇಹದಲ್ಲಿ ಆರಂಭವಾಗಿ ಅಂತೇ ಹಾಗೆಯೇ ಕೊನೆಗಾಣಬೇಕಲ್ಲದೆ, ಮದುವೆಯ ಬಂಧನ ಅದಕ್ಕೆ ಸಲ್ಲದು" ಎಂಬ ಅವನ ಮಾತುಗಳು ಅವಳ ಹೃದಯವನ್ನು ಕೊರೆದು ಮಾಯಲಾರದ ಗಾಯವನ್ನುಂಟು ಮಾಡಿದ್ದವು.

ಈ ಮಾತಿನ ಅರ್ಥವೇನು? ಇದು ಅವನು ಕುಚೇಷ್ಟೆಗೆಂದು ಆಡಿದ ಮಾತೆ? ಇಲ್ಲವೆ ನಿಜವಾಗಿಯೂ ಅವನು ತನ್ನ ನಿರ್ದಿಷ್ಟ ಅಭಿಪ್ರಾಯವನ್ನು ಸೂಚಿಸಿವನೆ? ಇದರಿಂದ ಸರ್‌ಪೀನ್ನೀಯು ಇವೆತ್‌ಳಲ್ಲಿ ಮದುವೆಯಾಗದಂತಹ ಅನರ್ಹತೆಯ ಲೋಪವನ್ನೇನು ಕಂಡು ಹಿಡಿದ? ಅವನ ಈ ರೀತಿಯ ವರ್ತನೆಯ ಕಾರಣವೇನು? ಸಕಾರಣಗಳನ್ನು ಹೇಳಿ ತನ್ನನ್ನು ಸಮಾಧಾನಗೊಳಿಸಿದರೆ ಅವಳಿಗೆ ಶಾಂತಿ. ಇಲ್ಲವಾದರೆ ಅತೃಪ್ತಿಯಿಂದ ಅವಳ ಮುಂದಿನ ಜೀವನವೇ ದುಃಖಮಯವಾಗುತ್ತಿತ್ತು. ತನ್ನನ್ನು ಅವಮಾನಗೊಳಿಸಿ ಅವರ ಗೊಡವೆಯೇ ಇಲ್ಲದೆ ಇದೊಂದು ಸಾಮಾನ್ಯ ವಿಷಯವೆಂದು ಬಗೆದು ಯಾವ ನೋವನ್ನೂ ತೋರಗೊಡದೆ ಹೋದ ಸರ್‌ಪೀನ್ನೀಯ ವರ್ತನೆ ಇವೆತ್‌ಳಿಗೆ ವಿಚಿತ್ರವೆನಿಸಿತು. ನಂಬಿದ ಗೆಳೆಯ ಮೋಸ ಮಾಡಿದಾಗ ಆಶೆಯಿಂದ ಇಚ್ಛಿಸಿದ ವಸ್ತುವನ್ನು ಇಲ್ಲವೆಂದು ಅಲ್ಲಗಳೆದಾಗ, ಆಗುವ ನೋವಿಗಿಂತಲೂ ಹೆಚ್ಚಿನ ದುಃಖ ಇವೆತ್‌ಳಿಗಾಯಿತು. ಎದೆಯೊಡೆಯುವ ಈ ವೇದನೆ ಸಹನೆಯ ಮೇರೆಯನ್ನು ಮೀರಿತ್ತು. ಆಪ್ತ ಮಿತ್ರನ ಮೋಸಕ್ಕೆ ಆಗುವ ದುಃಖದಷ್ಟೇ ನೋವು ಇವೆತ್‌ಳಿಗೆ ಆದುದು ಆಶ್ಚರ್ಯವಲ್ಲ.

ತನ್ನ ಜೀವನದ ಸುತ್ತಲೂ ಆವರಿಸಿದ್ದ ಈ ಸಂಶಯ, ಮೋಸ, ಸಂದಿಗ್ಧ ವಾತಾವರಣ ಅವಳ ಮನಸ್ಸನ್ನು ಕದಡಿಬಿಟ್ಟಿತು. ಇದರಿಂದ ದುಃಖ ಉಕ್ಕೇರಿ ಅವಳು ಮನದಣಿಯ ಅತ್ತು ಬಿಟ್ಟಳು. ಕಾದಂಬರಿಗಳಲ್ಲಿ ಓದಿದ ಇಂತಹ ಸನ್ನಿವೇಶಗಳ ನೆನಪು ಆಗಲು ಮತ್ತೆ ಮತ್ತೆ ಬಿಕ್ಕಿ ಬಿಕ್ಕಿ ಅತ್ತಳು

ತನ್ನ ಜೀವನದಲ್ಲಿ ನಡೆದು ಹೋದ ಅನೇಕ ಸನ್ನಿವೇಶಗಳನ್ನು ನೆನೆದು ಮರುಗಿದಳು. ತಾನು ಓದಿದ ಅನೇಕ ಹೃದಯ ದ್ರಾವಕ ಕತೆಗಳನ್ನು ನೆನೆದು ಕೊಂಡು ತನ್ನ ಜೀವನದ ಕೆಲವು ಅಂಶಗಳನ್ನು ಅವುಗಳಿಗೆ ಹೋಲಿಸಿ ಕೊಂಡು ಚಿಂತಿಸಿದಳು.

ಚಿಂತಿಸಿದಂತೆಲ್ಲ ತನ್ನ ಜೀವನದ ಇತಿಹಾಸ ಒಂದು ವಿಚಿತ್ರ ಸನಿವೇಶ ಗಳ ಕದಂಬದ ಕಂತೆಯೆಂದು ನೆನೆದಳು. ಇತ್ತೀಚೆಗೆ ನಡೆದು ಹೋದ ಕೆಲವೊಂದು ಮಹತ್ವದ ಘಟನೆಗಳು ಅವಳಿಗೆ ಸ್ವಲ್ಪ ಧೈರ್ಯವನ್ನು ತಂದೊಡ್ಡಿದ್ದವು. ಒಗಟಾಗಿ ಕಂಡು ಬಂದ ಅನೇಕ ವಿಷಯಗಳು ಅಷ್ಟು ಕಷ್ಟವಲ್ಲವೆಂಬ ನಿರ್ಣಯಕ್ಕೆ ಬಂದಳು. ಅಧೈರ್ಯದಿಂದ ಸುಮ್ಮನೆ ಕುಳಿತು ಕೊಳ್ಳದೆ, ಧೈರ್ಯದಿಂದ ಅವುಗಳನ್ನು ಎದುರಿಸುವುದೇ ಉತ್ತಮವೆಂದು ನೆನೆದಳು.

ತನ್ನ ಹಿಂದಿನ ಜೀವನದ ಇತಿಹಾಸದ ಬಗ್ಗೆ ಯೋಚಿಸ ತೊಡಗಿದಳು. ತಾನು ನಿಜವಾಗಿಯೂ ರಾಜಕುಮಾರಿಯೆ? ತನ್ನ ತಂದೆ ರಾಜವಂಶದವನೆ? ಇಲ್ಲವೇ ತಾನೋರ್ವ ಶ್ರೀಮಂತ ಮನೆತನದವಳೆ? ಓಬಾರ್ದಿಯು, ತನ್ನ ಹೆತ್ತ ತಾಯಿಯೇ, ಇಲ್ಲವೆ ಸಾಕುತಾಯಿಯೇ? ಹೀಗೆ ಅನೇಕ ರೀತಿಯಲ್ಲಿ ಚಿಂತಿಸ ತೊಡಗಿದಳು. ತಮ್ಮ ಮನೆಗೆ ಬರುವ ಜನರೆಲ್ಲರ ಆಕರ್ಷಕ ವಸ್ತುವಾಗಿಯೂ, ಪ್ರೇಮದಿಂದ ಆರಾಧಿಸುವ ವ್ಯಕ್ತಿಯೂ ಆಗಿರುವೆನೆಂದು ಒಂದೊಂದು ಸಲ ಇವೆತ್‌ಳು ಹಿಗ್ಗುತ್ತಿದ್ದಳು. ಈ ವಾತಾವರಣದಲ್ಲಿ ಅವಳೊಂದು ಆಟದ ಗೊಂಬೆಯಂತೆ, ನಾಟಕದಲ್ಲಿಯ ಪಾತ್ರದಂತೆ, ಯಾವ ಬಗೆಯ ಸ್ವಾತಂತ್ರ್ಯ ವಿಲ್ಲದೆ ಚಲಿಸುತ್ತಿದ್ದಳು. ಸ್ವಯಂಸ್ಫೂರ್ತಿಯಿಂದ ಏನನ್ನೂ ಮಾಡುತ್ತಿ ರುವದಿಲ್ಲವೆಂಬುದು ಇವೆತ್‌ಳು ತಿಳಿದಿದ್ದಳು. ಇಂತಹ ಜೀವನ ಇನ್ನೆಷ್ಟು ದಿನಗಳು ಕಳೆಯಬೇಕೆಂದು ಸುಮ್ಮನೆ ಕೊರಗಿದಳು. ಇಡೀ ರಾತ್ರಿಯೆಲ್ಲ ಯೋಚನೆಯಲ್ಲಿ ಕಳೆದು ಅನೇಕ ಸಲ ಅತ್ತು ವ್ಯರ್ಥ ದುಃಖದ ಯಾತನೆ ಯನ್ನು ಅನುಭವಿಸಿ ಕೊನೆಗೆ ಸುಮಾರು ಮುಂಜಾನೆ ನಾಲ್ಕುಗಂಟೆಯ ಸಮಯಕ್ಕೆ ಹೆಚ್ಚು ದಣುವಾದುದರಿಂದ ಮೈಮರೆತು ನಿದ್ರಿಸಿದಳು.

ಮುಂದಿನ ಎರಡು ದಿನಗಳೂ ಯಾವ ಬಗೆಯ ಹೆಚ್ಚಿನ ಮಾತು ಕತೆ ಇಲ್ಲದೆ ಜಾರಿದವು. ಅವಳು ಮೌನದಿಂದಲೇ ಇದ್ದುದು ಓಬಾರ್ದಿಗೆ

ಆಶ್ಚರ್ಯವೆನಿಸಿತು. ಆ ಮೌನದಲ್ಲಿಯೂ ಇವೆತ್‌ಳು ತೀವ್ರ ಯೋಚನೆಗೊಳಗಾಗಿದ್ದಳು. ತರ್ಕವಿತರ್ಕಗಳಿಂದ ತನ್ನ ಮುಂದಿನ ಕರ್ತವ್ಯವನ್ನು ನಿರ್ಧರಿಸುವುದರಲ್ಲಿದ್ದಳು. ಒಮ್ಮೆ ಒಂದು ನಿಶ್ಚಯಕ್ಕೆ ಬಂದು ಮತ್ತೆ ಅದು ಸರಿಯಲ್ಲವೆಂದು ಮತ್ತೊಂದು ಯೋಚನೆಯಲ್ಲಿ ತೊಡಗುತ್ತಿದ್ದಳು. ತನ್ನನ್ನು ಎಲ್ಲರೂ ಮೋಸಗೊಳಿಸುತ್ತಿರುವರೆಂಬ ಧೃಡ ನಿಶ್ಚಯಕ್ಕೆ ಬಂದಿದ್ದಳು. ತನ್ನ ತಾಯಿಯಲ್ಲಿಯೂ ಅವಳಿಗೆ ವಿಶ್ವಾಸ ಕಡಮೆಯಾಯಿತು. ಮುಂದೆ ಒದಗಬಹುದಾದ ಪ್ರಮೇಯಗಳೆಲ್ಲವನ್ನೂ ತರ್ಕಿಸಿ ತಾನು ಹೇಗೆ ವರ್ತಿಸಬೇಕೆಂಬುವನ್ನು ನಿರ್ಣಯಿಸುವುದರೊಳಗಾಗಿ, ಮತ್ತೊಂದು ಬಗೆಯ ಯೋಚನೆ ಹೊಳೆಯಲು ತನ್ನ ನಿರ್ಧಾರವನ್ನು ಬದಲಿಸುತ್ತಿದ್ದಳು. ಸೋಮ ಮಂಗಳವಾರಗಳು ಹೀಗೆ ಅನಿಶ್ಚಯ ಯೋಚನೆಗಳಲ್ಲಿಯೇ ಮುಂದರಿಯಲು ಬುಧವಾರದ ದಿನ ಒಂದು ನಿಶ್ಚಿತ ನಿರ್ಣಯಕ್ಕೆ ಬಂದಳು. ಹೊರಗಿನವರಿಗೆ ಏನೂ ತಿಳಿಯದವಳಂತೆ ತಾನು ವರ್ತಿಸಿ ಜಾಣತನದಿಂದ ನಡೆದುಕೊಳ್ಳುವುದು ಒಳಿತೆಂದು ಭಾವಿಸಿದಳು. ಯಾವ ತೊಡಕು ಬಂದರೂ ಧೈರ್ಯದಿಂದ ಎದುರುಗೊಳ್ಳುವುದೇ ಒಳ್ಳೇಯದೆಂದು, ಸರಿಯೆಂದು ಗುರುವಾರ ಏಳುವಾಗ ನಿಶ್ಚಯಿಸಿದಳು.

"ತಾನು–ತನ್ನ ಯೋಚನೆ" ಎಂಬ ಮಾರ್ಗವನ್ನು ಅನುಸರಿಸಿ ಯಾರೊಂದಿಗೂ ಹೆಚ್ಚಿನ ಸಲುಗೆಯಿಂದ ವರ್ತಿಸದೆ ಇರುವುದು ಒಳಿತೆಂದು ನಿರ್ಣಯಿಸಿದಳು.

ಗುರುವಾರ ಹತ್ತು ಗಂಟೆಗೆ ನಿಶ್ಚಯಿಸಿದಂತೆ, ನಾವಾಲ್ ಮತ್ತು ಸರ್‌ವೀನ್ನೀಯವರು ಬಂದರು. ಅವರನ್ನು ಸ್ವಾಗತಿಸಲು ಮೌನದಲ್ಲಿಯೇ ತನ್ನ ಬಲಗೈ ಮುಂದೆ ಚಾಚಲು ಇಬ್ಬರೂ ಅದನ್ನು ಮುದ್ದಿಸಿದ ನಂತರ "ನಿಮಗೆ ಸ್ವಾಗತ ಸರ್‌ವೀನ್ನೀಯವರೇ?" ಎಂದು ಇವೆತ್‌ಳು ಕೇಳುವಾಗ ಅವಳ ಆ ನುಡಿಯಲ್ಲಿ ಅಡಗಿದ್ದ ಗಂಭೀರತೆಯನ್ನು ಕಂಡು ಸರ್‌ವೀನ್ನೀಯು "ಇಂದು ಮತ್ತಾವ ಕುಚೇಷ್ಟೆಯ ಆಟವನ್ನು ಹೂಡಲು ಯತ್ನಿಸುತ್ತಿರುವಳೋ" ಎಂದು ಮನದಲ್ಲಿಯೇ ನೆನೆದು ಅವಳ ಸ್ವಾಗತದ ನುಡಿಗೆ ಮಾರುತ್ತರವಾಗಿ "ಚೆನ್ನಾಗಿದ್ದೇನೆ" ಎಂದು ಹೇಳಿ ನಸುನಕ್ಕು ಸುಮ್ಮನಾದ.

ಓಬಾರ್ದಿಯು ಸಾವಾಲ್‌ನ ಕೈಹಿಡಿದು ಮನೆಯ ಮುಂದೆ ಇದ್ದ ವನದಲ್ಲಿ ದೂರ ಸರಿಯಲು, ಸರ್‌ವೀನ್ನೀಯು ಇವೆತ್‌ಳ ಜತೆಯಲ್ಲಿ ತೋಟದ ಮತ್ತೊಂದು ಭಾಗಕ್ಕೆ ಸರಿದನು.

ಇವೆತ್‌ಳು ಮೌನದಲ್ಲಿಯೇ ದೀರ್ಘಾಲೋಚನೆಯಲ್ಲಿರುವುದನ್ನು ಕಂಡು ಸರ್‌ವೀನ್ನೀಗೆ ಏನೂ ತೋರಲಿಲ್ಲ. ಹಾಗೆ ಇಬ್ಬರೂ ಕೊಂಚ ದೂರ ನಡೆದ ನಂತರ "ಸರ್‌ವೀನ್ನೀಯವರೆ, ನೀವು ನಿಜವಾಗಿಯೂ ನನ್ನ ಆಪ್ತ ಮಿತ್ರರೆಂದು ಭಾವಿಸಲೆ?'' ಎಂದು ಇವೆತ್‌ಳು ಮಾತಿಗೆ ಮೊದಲಿಟ್ಟಳು.

" ಈ ವಿಷಯದಲ್ಲಿ ನಿನಗೆ ಇನ್ನೂ ಸಂಶಯವೇ ಇವೆತ್ ?"

" ಅದಿರಲಿ. ಈ ಕ್ಷಣದಲ್ಲಿ, ಇಲ್ಲಿ, ನೀವು ನನ್ನ ಆಪ್ತ ಮಿತ್ರರೆಂದು ಒಪ್ಪಿಕೊಳ್ಳುವಿರಾ ?"

" ಆಡಿದ ಮಾತಿಗೆ ನಾನೆಂದೂ ತಪ್ಪಿ ನಡೆಯುವವನಲ್ಲ. ಕಾಯಾ ವಾಚಾ ಮನಸಾ ನಾನು ನಿನ್ನವನು.''

" ಈ ನಿಮ್ಮ ಮಾತು ಏನು ಬಂದರೂ, ಯಾವ ಪರೀಕ್ಷಾ ಸಮಯ ಬಂದೊದಗಿದರೂ ಸುಳ್ಳಾಗಲಾರದು ತಾನೆ ?''

" ನಾನೆಂದೂ ನಿನನ್ನು ಮೋಸಗೊಳಿಸುವುದಿಲ್ಲ. ಮತ್ತೇನು ?"

" ಮತ್ತೇನೂ ಇಲ್ಲ. ಇರಲಿ. ಕ್ರಾವಲೋವದ ರಾಜಕುಮಾರನ ಬಗ್ಗೆ ನಿಮ್ಮ ಅಭಿಪ್ರಾಯವೇನು ?"

" ಅವನೊಬ್ಬ ಪೈಶಾಚಿಕ ವೃತ್ತಿಯ ವ್ಯಕ್ತಿ."

" ಆಗಲೇ ನಿಮ್ಮ ಸುಳ್ಳಿನ ಕಂತೆ ಆರಂಭವಾಯಿತಲ್ಲವೆ ?''

" ಇಲ್ಲ ಇವೆತ್, ಇಲ್ಲ. ಅವನ ಬಗ್ಗೆ ಹೇಳಲು ಸರಿಯಾದ ಮಾತುಗಳು ನೆನಪಾಗಲಿಲ್ಲ. ಹೌದು, ಕ್ರಾವಲೋವದ ರಾಜಕುಮಾರನು ರಶಿಯಾ ದೇಶದವನು: ಅವನ ನಡೆ ನುಡಿ ಎಲ್ಲವೂ ರಷಿಯನ್ನರನ್ನು ಹೋಲುವುದು. ರಷಿಯಾದಿಂದ ಇಲ್ಲಿಗೆ ಬರುವ ಸಮಯದಲ್ಲಿ ಬೇಕಾದ ಪುರಾವೆಗಳಿಂದ ಬಂದಿರ ಬಹುದು. ಆದರೆ ಅವನು ತನ್ನ ಹೆಸರು ಮಾತ್ರ ಬದಲಾಯಿಸಿದಂತೆ ನನಗೆ ಅನುಮಾನ. "

ಇವೆತ್ಳು ಅವನನ್ನು ಎವೆ ಇಕ್ಕದೆ ನೋಡಿ, "ಅಂದರೆ, ಆತನು...."

" ಅಂದರೆ ಆವನೋರ್ವ ದೇಶಪರ್ಯಟನದಲ್ಲಿ ಅಭಿರುಚಿಯುಳ್ಳ ದೇಶ ಸಂಚಾರಿ. ಉತ್ಸಾಹದಿಂದ ಎಲ್ಲ ದೇಶಗಳನ್ನು ಸುತ್ತಬೇಕೆಂಬ ಹಂಬಲ ಆವನದು. "

" ಈ ಸೂಚನೆಗೆ ತಮ್ಮನ್ನು ಅಭಿನಂದಿಸುತ್ತೇನೆ. ಮತ್ತೆ, ಯೋಧರಾದ ವಾಲ್‌ರಿಯೇಲಿಯವರೂ (Valreali) ಇದೇ ಜಾತಿಯವರೆಂದ ಹಾಗಾಯಿತು ?"

" ಅಹುದು ಇವೆತ್. ನಿನ್ನ ಈ ನಿಶ್ಚಯ ನಿಜವೇ ಸರಿ. "

" ಆದರೆ ಶ್ರೀಯುತ ಬೆಲ್‌ವೀನ್ನೀಯವರೋ ? "

" ಆತನ ಮಾತೇ ಬೇರೆ. ಆತನು ಇದೇ ದೇಶದವನು. ಸ್ವಲ್ಪ ಮಟ್ಟಿಗೆ ಮರ್ಯಾದೆಯಿಂದ ಬಾಳಿದವನು. ಆದರೆ ಇತ್ತೀಚೆಗೆ ಹೆಚ್ಚು ದುಂದುಗಾರಿಕೆಯಲ್ಲಿ ನಿರತನಾದಂತೆ ಕಂಡುಬರುತ್ತದೆ. ಆವನು ಆದಾಯಕ್ಕೆ ಮಿಕ್ಕಿ ಖರ್ಚು ಮಾಡುವ ಸ್ವಭಾವದವನು. "

" ತಾವೋ ? "

" ನಾನೊಂದು ಭ್ರಮರದಂತೆ. ವಿಲಾಸವೇ ನನ್ನ ಜೀವನದ ಧ್ಯೇಯ. ನಮ್ಮ ಮನೆತನ ಹಿರಿದು. ನಮ್ಮವರು ಸುಸಂಸ್ಕೃತರೆಂದು ಹೆಸರುಗೊಂಡಿದ್ದಾರೆ. ನಮ್ಮವರು ತಮ್ಮ ಜಾಣತನವನ್ನು ಇಂತಹ ಕೆಲಸಗಳಲ್ಲಿ ಉಪಯೋಗಿಸಿ, ದೇವರಿತ್ತ ಅಲ್ಪ ವಯಸ್ಸಿನಲ್ಲಿ ಸುಖದಿಂದ ಜೀವಿಸಿ ಸಂತೋಷದಿಂದ ಬಾಳಿದವರು. ನಮ್ಮವರ ದೇಹಾರೋಗ್ಯವೆಂದೂ ಕೆಟ್ಟಿಲ್ಲ. ಇತರರು ದುಃಖದಿಂದಿರುವುದನ್ನು ಕಂಡು ಸಹನೆ ತೋರಬಾರದೆಂದು, ವಿಲಾಸ ಪ್ರಿಯ ಸ್ತ್ರೀಯರಲ್ಲಿ ನಂಬಿಕೆ ಇಡಬಾರದೆಂದು, ನಮ್ಮ ಸುತ್ತಲಿನ ಸಾಮಾನ್ಯ ಜನರಲ್ಲಿ ವಿಶ್ವಾಸ ತಾಳುವುದೆಂದು, ನನ್ನ ಕೈಯಿಂದಲೇ ನಡೆದು ಹೋದ ಕಾರ್ಯದ ಬಗ್ಗೆ ಚಿಂತಿಸಬಾರದೆಂದು ನಿಶ್ಚಯಿಸಿರುವೆನು. ಇವುಗಳೇ ನನ್ನ ಹಿರಿಯರ ಜೀವನದಿಂದ ಕಲಿತುಕೊಂಡ ಪಾಠಗಳೆನ್ನಬಹುದು. ನನಗೆ ತೋರಿಬಂದ ಅಭಿಪ್ರಾಯಗಳನ್ನು ನಿಸ್ಸಂಕೋಚವಾಗಿ ಹೇಳಿ ಬಿಡುವ ಸ್ವಭಾವ ನನ್ನದು. ಹೀಗಿದ್ದರೂ ನಾನು ಕ್ರೂರ ಸ್ವಭಾವದವನಲ್ಲವೆಂದು ನಿನಗೆ ಮನವರಿಕೆಯಾಗಿರಲಿಕ್ಕೆ ಸಾಕು, ಇವೆತ್. ಈ ಗುಣದೋಷಗಳಿಂದ ನಾನು ನಿನ್ನಲ್ಲಿ ಪ್ರೇಮ ಭಿಕ್ಷೆಯನ್ನು ಬೇಡುತ್ತೇನೆ. ನಿನ್ನ

ನಿಶ್ಚಿತ ಅಭಿಪ್ರಾಯಕ್ಕಾಗಿ ಕಾದಿರುವೆನು. ನನ್ನ ತನು ಮನಧನಗಳೆಲ್ಲವೂ ನಿನ್ನ ಅಧೀನ. ನೀನು ಆಜ್ಞಾಪಿಸಿದಂತೆ ನಡೆದುಕೊಳ್ಳುವೆನೆಂದು ಪ್ರಮಾಣ ಮಾಡಿ ಹೇಳುತ್ತೇನೆ."

ಇವೆತ್‌ಳು ಸರ್‌ವಿನ್ನೀಯ ಈ ನಿವೇದನೆಯನ್ನು ಕುತೂಹಲದಿಂದ ಕೇಳುತ್ತಿದ್ದಳು. ಅವನ ಪ್ರತಿಯೊಂದು ವಾಕ್ಯವನ್ನು ಲಕ್ಷ್ಯದಲ್ಲಿಟ್ಟು ಯೋಚಿಸುತ್ತಿದ್ದಳು. ತನ್ನ ಮಾತನ್ನು ಮುಂದುವರಿಸುತ್ತ, "ಇರಲಿ. ಛಾಮೀ ದೇಶದ ಕೌಂಟೆಸ್ಸಳ ಬಗ್ಗೆ ನಿಮ್ಮ ಅಭಿಪ್ರಾಯ?"

" ನಾನು ಹೆಂಗಸರ ಬಗ್ಗೆ ಏನನ್ನೂ ಹೇಳಬಯಸುವುದಿಲ್ಲ."

" ಯಾವ ಹೆಣ್ಣನ್ನೂ ಕುರಿತು ತಾವು ಅಭಿಪ್ರಾಯ ಸೂಚಿಸುವುದಿಲ್ಲವೆ?"

" ಅಹುದು ಇದುವೇ ನನ್ನ ನಿರ್ಣಯ."

" ಎಂದ ಮೇಲೆ ಎಲ್ಲ ಸ್ತ್ರೀಯರ ಬಗ್ಗೆ ನಿಮ್ಮ ಅಭಿಪ್ರಾಯ ಒಳ್ಳೆಯದಾಗಿಲ್ಲವೆಂದು ನಾನು ಊಹಿಸಬಹುದೆ? ಯೋಚಿಸಿ. ನೀವು ನಿಮ್ಮ ನಿರ್ಣಯದಂತೆ ಒಂದು ಸಲವಾದರೂ ತಪ್ಪಿ ನಡೆಯುವ ಪ್ರಸಂಗ ಬಂದೀತು."

ಇವೆತ್‌ಳ ಈ ಸವಾಲಿನ ಅರ್ಥವಾಯಿತು. ತನ್ನನ್ನು ಮಾತಿನ ಜಾಲದಲ್ಲಿ ಸಿಲುಕಿಸಿ ಸೋಲಿಸಬೇಕೆಂದು ಮಾಡಿದ ಅವಳ ಸಂಕಲ್ಪದ ಪೂರ್ಣ ಅರಿವು ಅವನಿಗಾಯಿತು. ಮರುಕ್ಷಣವೇ "ಇಲ್ಲ ಇವೆತ್. ನನ್ನೆದುರಿನಲ್ಲಿ ನೀನು ಮಾತ್ರ ಈ ವರ್ಗದಲ್ಲಿ ಸೇರಿಲ್ಲ.'' ಎಂದು ಹೇಳಿದ.

ಅವಳು ಕೋಚ ನಕ್ಕು "ಹಾಗೆಂದು ನನಗೆ ತಿಳಿದಿತ್ತು. ಆದರೆ ನನ್ನ ಬಗ್ಗೆ ತಮ್ಮ ಅಭಿಪ್ರಾಯವೇನು?" ಎಂದಳು.

" ಅದನ್ನು ನೀನು ಕೇಳಲೇಬೇಕೆಂದು ನಿಶ್ಚಯಿಸಿದಂತೆ ಕಾಣುತ್ತದೆ. ಅದೂ ನನ್ನ ಮುಖದಿಂದಲೇ ಕೇಳಬೇಕೆಂದು ನೀನು ನೆನೆದ ಮೇಲೆ ನಾನಾದರೂ ಏನು ಮಾಡಲಿ? ಹಾಗಾದರೆ ಕಿವಿಗೊಟ್ಟು ಕೇಳು ನೀನು ವಯಸ್ಸಿಗೆ ಬಂದ ಚತುರಳಾದ ಯುವತಿ. ನಿನ್ನ ಜಾಣತಕ್ಕೆ ಯಾರೂ ಸರಿಮಿಗಲಾರರು. ಸಮಯೋಚಿತವಾದ ಬುದ್ಧಿ ಚಾತುರ್ಯ ನಿನ್ನದು. ನೀನು ವ್ಯವಹಾರ ಕುಶಲಳು. ನಿಮ್ಮ ಮನೆಗೆ ಬಂದ ಮಿತ್ರರನ್ನು, ಅವರವರ ಅಭಿರುಚಿಗಳಿಗೆ ತಕ್ಕಂತೆ ಉಪಚರಿಸುವ ಕುಶಲತೆ ನಿನ್ನಲ್ಲಿದೆ. ಮಾತಿನ ಜಾಲ

ದಲ್ಲಿ ಜನರನ್ನು ಕೆಡವಿ ಅವರವರ ನಿಜಸ್ವರೂಪವನ್ನು ಹೊರ ಹಾಕುವ ನಿಪುಣತೆ ನಿನ್ನಲ್ಲಿದೆ. ಅವರವರ ಮುಖದಿಂದಲೇ ತಮ್ಮ ತಪ್ಪು ಒಪ್ಪುಗಳ ವರದಿಯನ್ನು ಒಪ್ಪಿಕೊಳ್ಳುವಂತೆ ಮಾಡುವ ತಂತ್ರ ನಿನ್ನಲ್ಲಿದೆ ಇವೆತ್." ಎಂದನು.

"ನಿಮ್ಮ ವರ್ಣನೆ ಇಲ್ಲಿಗೆ ಮುಗಿಯಿತೋ?" ಎಂದಳು.

"ಆಯಿತು. ನಾನು ಹೇಳಬೇಕೆಂಬುವುದನ್ನೆಲ್ಲ ಹೇಳಿದ ಹಾಗಾಯಿತು." ಎಂದನು.

"ಹಾಗಾದರೆ ಈ ನಿಮ್ಮ ಅಭಿಪ್ರಾಯ ಸುಳ್ಳೆಂದು ನಾನು ನಿಶ್ಚಯ ಮಾಡಿ ಕೊಡುವೆನು." ಎಂದು ಇವೆತ್‌ಳು ಹೀಗೆ ತನ್ನ ನಿಶ್ಚಯವನ್ನು ಹೇಳುವ ಹೊತ್ತಿಗೆ, ಸಾವಾಲ್ ಮತ್ತು ಓಬಾರ್ದಿಯವರು ದೂರದಲ್ಲಿ ಕಾಣಿಸಿಕೊಂಡರು. ಓಬಾರ್ದಿಯ ಆಗಿನ ಭಂಗಿ ಬಹು ರಮ್ಯವಾಗಿತ್ತು. ಮೆಲ್ಲನೆ ಪಾದಛಾಯೆಯನ್ನು ಹಾಕುವ ಅವಳ ನಿಲುವು, ಅಲ್ಲಲ್ಲಿ ಕೊಂಚ ನಿಂತು ನೆಲದ ಮೇಲೆ ಹರಡಿದ ಉಸುಗಿನಲ್ಲಿ ಕಾಲಿನ ಬೆರಳುಗಳಿಂದಬರೆಯುತ್ತಲಿದ್ದ ರೀತಿ, ಸಾವಾಲ್‌ನ ಹತ್ತಿರವೇ ನಿಂತು,ಏಕೆ ಅವನ ಹೆಗಲಮೇಲೆ ಭಾರ ಹಾಕಿ, ಬಾಗಿ ಮುಂದರಿಯುವ ರೀತಿ, ಅವಳಂದು ಬಲು ಆನಂದದಲ್ಲಿ ಮುಳುಗಿದ್ದಳೆಂದು ಹೇಳಬಹುದಾಗಿತ್ತು.

ತನ್ನ ತಾಯಿಯ ಈ ಚಿತ್ರ ಕಂಡು ಇವೆತ್‌ಳು ಕೊಂಚ ಬೆದರಿದಳು. ಅವಳ ಹತ್ತಿರ ಹೋಗಲೋ ಬೇಡವೋ ಎಂದು ಅನುಮಾನಿಸಿದಳು. ಸರ್ ವೀನ್ನೀಯ ದೃಷ್ಟಿಪಥದಿಂದ ದೂರ ಸರಿದ ಇವೆತ್‌ಳು ತಾಯಿಯನ್ನು ಸಮೀಪಿಸಿ ಏನನ್ನೋ ಹೇಳಲು ಬಯಸುವ ವೇಳೆಗೆ ಸರಿಯಾಗಿ ಊಟವು ಸಿದ್ಧವಾಗಿದೆಯೆಂದು ಸೂಚಿಸುವ ಗಂಟೆ ಬಾರಿಸಿತು.ಆದುದರಿಂದ ಎಲ್ಲರೂ ಊಟದ ಸ್ಥಳಕ್ಕೆ ಹೊರಟರು.

ಊಟವು ಮನೆಯ ಮೇಲ್ಮಾಳಿಗೆಯ ಮೇಲೆ ಕಿರಿಬಯಲಿನಲ್ಲಿ ಏರ್ಪಡಿಸಲಾಗಿತ್ತು.ವಾತಾವರಣವು ಊಟಕ್ಕೆ ಅನುಕೂಲವಾಗಿ ಕಂಡು ಬಂದರೂ ಕಪ್ಪು ಮೋಡಗಳಿಂದ ಮಳೆಗಾಳಿಯ ಸುಳಿವು ಕಾಣುತ್ತಿದ್ದುದರಿಂದ ಊಟವನ್ನು ಎಲ್ಲಿ ನಡುವೆ ನಿಲ್ಲಿಸಬೇಕಾಗುತ್ತದೋ ಎಂಬ ಸಂಶಯ ಎಲ್ಲರನ್ನೂ ಆವರಿಸಿತ್ತು,

ಕಾಫಿಯನ್ನು ಸೇವಿಸುತ್ತ ಓಬಾರ್ದಿಯು ನಗುಮುಖದಿಂದ "ಇವೆತ್, ಇಂದು ನೀನು ಸರ್‌ವೀನ್ನೀಯವರೊಂದಿಗೆ ವಾಕಿಂಗ್ ಹೋಗಬಯಸುವುದಿಲ್ಲವೇ? ಇಂದಿನ ಇಂತಹ ಹವೆ ವಾಕಿಂಗಿಗೆ ಬಹು ಅನುಕೂಲವೆಂದು ನನಗೆನಿಸುತ್ತದೆ. ಗಿಡಗಳ ನೆರಳಿನಲ್ಲಿ ವಿಹರಿಸುವುದೆಂದರೆ ನನಗೇಕೋ ಬಹು ಆನಂದ'' ಎಂದಳು.

ಇವೆತ್‌ಳು ತಾಯಿಯನ್ನು ಸುಮ್ಮನೇ ದಿಟ್ಟಿಸಿ ನೋಡಿದಳು. ಸರ್ ವೀನ್ನೀಯು ಇವೆತ್‌ಳ ನಿರ್ಣಯದ ನುಡಿಗಾಗಿ ಕಾತರನಾದಂತೆ ಅವನ ಮುಖದ ಲಕ್ಷಣ ಹೇಳುತ್ತಿತ್ತು.

" ಇಲ್ಲಮ್ಮ, ಇಂದು ನಾನು ಹೊರಗೆ ಹೋಗಬಯಸುವುದಿಲ್ಲ.''

ಈ ನಿರ್ಧಾರ ಓಬಾರ್ದಿಗೆ ಬಹಳ ನೋವನ್ನುಂಟು ಮಾಡಿರಬೇಕು. ಆದರೂ ಅದನ್ನು ಹೊರಗೆ ತೋರಗೊಡದೆ, " ಇಲ್ಲ ಮಗು. ಹೋಗಿ ಬಾ. ನಿನ್ನ ನೊಂದ ಹೃದಯದಕ್ಕೆ ಈ ಹವೆ ಹಿತಕರ. ನನ್ನ ಮಾತು ಕೇಳು." ಎಂದು ಮತ್ತೆ ನಿಶ್ಚಿತವಾದ ವಾಣಿಯಿಂದ ಸೂಚಿಸಿದಳು.

ಇವೆತ್‌ಳು ಬಹಳ ನಿರ್ಭಿಡೆಯದ ಸರಣಿಯಲ್ಲಿ " ಇಲ್ಲಮ್ಮ! ನಾನು ಮನೆಯಲ್ಲಿಯೇ ಉಳಿಯುತ್ತೇನೆ. ಅದರ ಕಾರಣ ನಿನಗೆ ಈಗಾಗಲೇ ತಿಳಿದಿರಲಿಕ್ಕೆ ಸಾಕು. ಅಂದು ನಾನಾಡಿದ ಮಾತು ನೀನಿನ್ನೂ ಮರೆತಿರಲಿಕ್ಕಿಲ್ಲ." ಎಂದಳು.

ಓಬಾರ್ದಿಗೆ ಬಹು ಬೇಸರವಾಯಿತು. ಮತ್ತೆ ಮತ್ತೆ ಒತ್ತಾಯಪಡಿಸುವುದು ಒಳಿತಲ್ಲವೆಂದು ನೆನೆದರೂ, ಮನೆಯಲ್ಲಿ ಸಾವಾಲ್‌ನ ಜತೆಯಲ್ಲಿ ಕಳೆಯಬೇಕೆಂದು ನಿಶ್ಚಯಿಸಿದ ಅವಳ ಎಣಿಕೆ ಅಂದು ಕೈಗೂಡಲಿಲ್ಲವೆಂಬ ನೋವನ್ನು ಹೊರಗೆ ತೋರಗೊಡದೆ," ಅಹುದು ಮಗು ನನಗೆ ನೆನಪಾಗಲಿಲ್ಲ. ನನ್ನ ತಲೆ ಇಂದೇಕೋ ಸಮಸ್ಥಿತಿಯಲ್ಲಿ ಉಳಿದಿಲ್ಲ'' ಎಂದು ಹೇಳಿ ಸುಮ್ಮನಾದಳು.

ಎಲ್ಲರೂ ಕುಳಿತ ಆಸನದಿಂದ ಏಳದೇ, ಕೆಲಸಕ್ಕೆ ಬಾರದ, ಅಸ್ಥಿ ಇಲ್ಲದ ಹರಟೆಯಲ್ಲಿ ಕೊಂಚ ಸಮಯ ಕಳೆದರು. ಆಶಾಪೂರಿತ ನೋಟವನ್ನು ಸಾವಾಲ್‌ನ ಕಡೆ ಅನೇಕ ಸಲ ಬೀರಿದ ಓಬಾರ್ದಿಯು, ತನ್ನ ಆಟ ಸಾಗದೆ ಇದ್ದುದಕ್ಕೆ ಮೌನದಲ್ಲಿಯೇ ನೊಂದುಕೊಂಡು, ಸರ್‌ವೀನ್ನೀ

ಯನ್ನು ಕುರಿತು "ಮಹಾಶಯರೇ, ಇಂದು ಸಂಜೆ ನೀವು ಇಲ್ಲಿಯೇ ಉಳಿಯಬೇಕೆಂದು ನಿಶ್ಚಯವಾಗಿದೆ. ನಾಳೆ ನಾವು ಮುಂಜಾನೆ ಷಾತೋ ದಲ್ಲಿರುವ ಪೂನೇ ಹೋಟಲಿನಲ್ಲಿ ಉಪಹಾರ ಮಾಡುವ ಇದು ನಿಮಗೆ ಇಷ್ಟ ತಾನೆ?" ಎಂದು ಕೇಳಿದಳು.

"ತಮ್ಮ ನಿರ್ಣಯದಂತೆ ನಾವು ನಡೆದುಕೊಳ್ಳಲು ಯಾವಾಗಲೂ ಸಿದ್ಧರಿ" ಎಂದು ಸರ್ವೀನ್ನೀಯು ತನ್ನ ಸಮ್ಮತಿಯನ್ನು ಸೂಚಿಸಿದ. ಸಾವಾಲ್‌ನ ಮೌನವೂ ಇದಕ್ಕೆ ಬೆಂಬಲವೆಂದು ಓಬಾರ್ದಿಯು ಗ್ರಹಿಸಿ ಮನದಲ್ಲಿಯೇ ಹಿಗ್ಗಿದಳು.

ಅಂದೆಲ್ಲ ಆ ಮಿತ್ರರಿಬ್ಬರೂ ನಿರುತ್ಸಾಹದಿಂದ ದಿನವನ್ನು ನೂಕಿದರು. ಮಳೆಗಾಳಿ ಬರುವುದೆಂಬ ಸಂಶಯದಿಂದ ಯಾರೂ ಹೊರಗೆ ಹೋಗುವ ಬಯಕೆ ಸೂಚಿಸಲಿಲ್ಲ. ಅಂತೂ ರಾತ್ರಿ ಊಟದ ವೇಳೆ ಸಮೀಪಿಸಿತು. ಸಂಜೆಯ ಊಟವೂ ಮೌನದಲ್ಲಿಯೇ ಮುಗಿಯಿತು. ಅವರೆಲ್ಲರಲ್ಲಿ ಒಂದು ಬಗೆಯ ನಿರುತ್ಸಾಹ ತುಂಬಿಕೊಂಡಿತ್ತು. ರಾತ್ರಿ ಮುಂದರಿದಂತೆಲ್ಲ ಕಪ್ಪು ಮೋಡಗಳಿಂದ ಆಕಾಶವು ಭೀಕರವಾಗಿ ಕಾಣತೊಡಗಿತು. ಮಿಂಚು ಮಿಂಚಿ ಮಾಯವಾದಂತೆಲ್ಲ ಒಬ್ಬೊಬ್ಬರ ಹೃದಯದಲ್ಲಿ ಭೀತಿ ಸಂಶಯಗಳು ತಲೆದೋರುತ್ತಿದ್ದವು. ಗಾಳಿಯೂ ಇರಲಿಲ್ಲ. ಸೆಕೆ ಹೆಚ್ಚಾಗಿ ಎಲ್ಲರೂ ಬೇಸತ್ತರು. ಇದರ ಜೊತೆಗೆ ಮೌನದ ವಾತಾವರಣ ಇವರಲ್ಲಿ ಹೆಚ್ಚಿನ ಬೇಸರವನ್ನುಂಟು ಮಾಡಿತ್ತು.

ಇವೆತ್‌ಳು ಎದ್ದು ನಿಂತು "ನನಗೆ ನಿದ್ದೆ ಬರುತ್ತಿದೆ. ನಾನು ಮಲಗಲು ಹೋಗುವೆನು." ಎಂದು ಹೇಳಿ ತಾಯಿಯ ಹತ್ತಿರ ಬರಲು, ಅವಳು ಹಣೆಯನ್ನು ಮುದ್ದಿಟ್ಟಳು. ಅತಿಥಿಗಳಿಬ್ಬರೂ ಇವೆತ್‌ಳ ಕೈಯನ್ನು ಮುದ್ದಿಡಲು ತನ್ನ ಕೋಣೆಗೆ ಹೊರಟಳು.

ಇವೆತ್‌ಳು ತನ್ನ ಕೋಣೆಗೆ ಹೋಗಿ, ಅರಿವೆಗಳನ್ನು ಬದಲಾಯಿಸಿ, ದೀವಪನ್ನು ಆರಿಸಿದಳು. ಅದನ್ನು ಕಂಡು ಓಬಾರ್ದಿಯು ಅವಳ ಕೋಣೆಯ ಕಡೆ ನೋಡುತ್ತ, "ಇವೆತ್‌ಳು ಮಲಗಿದಂತೆ ಕಾಣುತ್ತದೆ." ಎಂದು ನುಡಿದ ನಂತರ ಸರ್ವೀನ್ನೀಯು ಅವರ ಅಪ್ಪಣೆ ಪಡೆದು ತನ್ನ ಮಲಗುವ ಕೋಣೆಗೆ ಹೋದನು.

ಸಾವಾಲ್ ಮತ್ತು ಓಬಾರ್ಡಿ ಇಬ್ಬರೇ ಆ ಬಯಲಿನಲ್ಲಿ ಉಳಿದರು. ಈ ಸಮಯಕ್ಕಾಗಿ ಕಾದಿದ್ದ ಈ ಈರ್ವರೂ ಪರಸ್ಪರ ಆಲಿಂಗನದಲ್ಲಿ ಬೆರೆತಾಗ, ಓಬಾರ್ಡಿಯು "ಇಂದು ರಾತ್ರಿ ಇಲ್ಲಿಯೇ ಇದ್ದು ಬಿಡುವ" ಎಂದುದಕ್ಕೆ ಸಾವಾಲ್‌ನು ಮೌನದಿಂದ ತನ್ನ ಸಮ್ಮತಿಯನ್ನು ಸೂಚಿಸಿದನೆಂದು ಭಾವಿಸಿ,ಅವಳು ಅವನನ್ನು ಮತ್ತೆ ಮತ್ತೆ ಮುದ್ದಿಸಿದಳು.

ಮಲಗಲೆಂದು ಹೋಗಿದ್ದ ಇವೆತ್‌ಳು ತನ್ನ ಕೋಣೆಯ ದೀಪವನ್ನು ಆರಿಸಿ, ಸಪ್ಪಳವಾಗದಂತಹ ಬೂಟುಗಳನ್ನು ಧರಿಸಿ ಹಿಂದೆ ತಾವೆಲ್ಲರೂ ಊಟಕ್ಕೆ ಕುಳಿತಿದ್ದ ಬಯಲಲ್ಲಿ ಸ್ವಲ್ಪ ದೂರ ನಿಂತಳು. ಕತ್ತಲಲ್ಲಿ ಅವಳಿಗೇನೂ ಕಾಣಿಸುತ್ತಿರಲಿಲ್ಲ. ಪಿಸು ಮಾತುಗಳು ಮಾತ್ರ ಕೇಳಿಸುತ್ತಿದ್ದವು. ಅದು ಯಾರದಿರಬಹುದೆಂದು ಆತುರದಿಂದ ಕಿವಿಗೊಟ್ಟು ಕೇಳತೊಡಗಿದಳು. ಅಲ್ಲಿಯೇ ನಿಂತರೆ ತನ್ನ ಗುಟ್ಟು ರಟ್ಟಾಗುವುದೆಂದು ಭಾವಿಸಿ, ಮಾಳಿಗೆಯನ್ನೇರಿ ಅಲ್ಲಿಯ ಬಯಲಿನಿಂದ ಕೆಳಗೆ ಕುಳಿತಿದ್ದ ಜನರ ಮಾತುಗಳನ್ನು ಕೇಳಲು ಪ್ರಯತ್ನಿಸಿದಾಗ,ಅವಳ ಕಿವಿಗೆ "ನಾನು ನಿನ್ನನ್ನು ಪ್ರೀತಿಸುವೆ" ಎಂಬ ಮಾತುಗಳು ಸ್ಪಷ್ಟವಾಗಿ ಕೇಳಿ ಬಂದವು. ಅಲ್ಲಿ ಉಳಿದ ತನ್ನ ತಾಯಿ, ಮತ್ತು ಸಾವಾಲ್‌ರ ನಡುವೆ ಇಂತಹ ಮಾತುಗಳು ನಡೆಯುವುದೆಂಬ ವಿಷಯ ಅವಳಿಗೆ ಆಶ್ಚರ್ಯವನ್ನುಂಟು ಮಾಡಿತು.ಅವಳು ಹೆಚ್ಚಿನ ಕುತೂಹಲದಿಂದ ಕೊಂಚ ದಿಟ್ಟಿಸಿ ನೋಡಿ ಅಲ್ಲಿ ಕೆಳಗೆ ಇರುವವರು ಅವರಿಬ್ಬರೇ ಎಂದು ತಿಳಿಯುವುದರೊಳಗೆ ಅವರ ಚುಂಬನದ ಸಣ್ಣ ಸದ್ದು ಕೇಳಿಸಿದಾಗ ಇವೆತ್‌ಳು ರೊಚ್ಚಿಗೆದ್ದಳು. ತಾನು ಕಾಣುತ್ತಿರುವುದು, ಕೇಳುತ್ತಿರುವುದು ನಿಜವೇ ಎಂದು ಅವಳಿಗೆ ಮನವರಿಕೆಯಾಗಿದ್ದರೂ ಅವಳ ಮನಸ್ಸುಮಾತ್ರ ನಂಬಲಾರದ ಸ್ಥಿತಿಯಲ್ಲಿತ್ತು. ತನ್ನ ತಾಯಿಯು ಇಂತಹ ನೀಚ ವರ್ತನೆಗೆ ಹೇಗೆ ಸಮ್ಮತಿಸಿದಳೆಂದು ಅವಳು ಯೋಚನೆಯಲ್ಲಿರುವ ಸಮಯಕ್ಕೆ ಸರಿಯಾಗಿ,ಮತ್ತೊಮ್ಮೆ ಕಾಣಿಸಿಕೊಂಡ ಮಿಂಚಿನ ಬೆಳಕಿನಲ್ಲಿ ಓಬಾರ್ಡಿ ಮತ್ತು ಸಾವಾಲ್‌ರು ಆಲಿಂಗನದಲ್ಲಿ ತಲ್ಲೀನವಾಗಿರುವುದನ್ನು ಕಂಡು ಇವೆತ್‌ಳು ಆಶ್ಚರ್ಯಚಕಿತಳಾದಳು. ಆ ನೋಟವನ್ನು ನೋಡುವ ಸ್ಥೈರಣೆ ಅವಳಿಗಿರಲಿಲ್ಲ. ಆದರೂ ಮುಂದೇನು ನಡೆಯುವುದೆಂಬುವುದನ್ನು ನೋಡುವ ಕುತೂಹಲದಿಂದ ಮಳೆ ಬರುತ್ತಿದ್ದರೂ

ಅಲ್ಲಿಯೇ ಮರೆಯಲ್ಲಿ ನಿಂತು ತನ್ನ ತಾಯಿಯ ಕೋಣೆಯ ಕಡೆ ನೋಡ ತೊಡಗಿದಳು.

ಆ ಹೊತ್ತಿಗೆ ಓಬಾರ್ಡಿಯ ಕೋಣೆಯಲ್ಲಿ ಬೆಳಕು ತುಂಬಿಕೊಂಡಿತ್ತು. ಕಿಟಕಿಗಳು ಮುಚ್ಚಿದ್ದರೂ ದೀಪದ ಬೆಳಕಿನಲ್ಲಿ ನಡೆಯುವ ವ್ಯವಹಾರ ವೆಲ್ಲವೂ ಹೊರಗಿನವರಿಗೆ ಕಾಣಿಸುತ್ತಿತ್ತು. ಅವರಿಬ್ಬರೂ ಆ ಕೋಣೆಯಲ್ಲಿ ಪರಸ್ಪರಾಲಿಂಗನದಲ್ಲಿದ್ದು ಮುದ್ದುಗಳ ಮಳೆ ಸುರಿಸುತ್ತಿರುವ ದೃಶ್ಯದ ನೆರಳು ಕಿಟಕಿಯ ಗಾಜಿನ ಮೂಲಕ ಇವೆತ್‌ಳಿಗೆ ಕಾಣಿಸಿತು. ಇದೆಲ್ಲ ವನ್ನೂ ಮಳೆಯಲ್ಲಿಯೇ ನಿಂತು ನೋಡುತ್ತಲಿದ್ದ ಇವೆತ್‌ಳಿಗೆ ಹುಚ್ಚು ಹಿಡಿದಂತಾಯಿತು. ಭಾರವಾದ ಹೃದಯದಿಂದ ಮುಂದೇನು ಮಾಡಬೇಕೆಂ ಬುದು ಅವಳಿಗೆ ತೋಚದೆ, ಹೆಚ್ಚು ಸಮಯ ಅವಳು ಅಲ್ಲಿ ನಿಲ್ಲಲಾರದೆ ತನ್ನ ಕೋಣೆಗೆ ಹೋಗಿ ಒದ್ದೆಯಾದ ಅರಿವೆಗಳನ್ನು ಅವಸರದಿಂದ ತೆಗೆ ದೊಗೆದು, ಬೇಗ, ಮಲಗುವ ಅರಿವೆಗಳನ್ನು ದರಿಸಿ, ಹಾಸಿಗೆಯ ಮೇಲೆ ಮಲಗಿ ಮನದಣಿಯ ಅತ್ತುಬಿಟ್ಟಳು.

ಅವಳ ಅಳುವಿಗೆ ಕೊನೆಯೇ ಇರಲಿಲ್ಲ. ರಾತ್ರಿಯೆಲ್ಲ ಅಳುವುದರ ಲ್ಲಿಯೇ ಕಾಲ ಕಳೆದಳು. ಹಾಗೆ ಎಷ್ಟು ಹೊತ್ತು ದುಃಖದಲ್ಲಿ ಮಗ್ನಳಾಗಿ ದ್ದಳೋ ಅವಳಿಗೇ ತಿಳಿದಿರಲಿಲ್ಲ. ತಲೆ ಎತ್ತಿ ನೋಡಿದಾಗ ಬೆಳಗಾಗುವ ಸಮಯ ಸಮೀಪಿಸಿದಂತಿತ್ತು. ತನ್ನ ಕಣ್ಣಿನಿಂದಲೇ ಅಂತಹ ಕಾಮುಕ ದೃಶ್ಯವನ್ನು, ಪ್ರೇಮಲೀಲಾ ಚಿತ್ರವನ್ನು ನೋಡಬೇಕಾಯಿತೆಂದು ಅವಳಿ ಗಾದ ವ್ಯಥೆ ಹೇಳತೀರದು. ದುಃಖದ ಆವೇಗದಲ್ಲಿ ಯೋಚಿಸಿ ಯೋಚಿಸಿ ಅವಳು ಹುಚ್ಚಳಂತೆ ಕೋಣೆಯಲ್ಲೆಲ್ಲ ಜಗಿದಾಡುವಂತೆ ಉದ್ರೇಕಗೊಂ ಡುದು ಆಶ್ಚರ್ಯವಲ್ಲ.

ಕೊಂಚ ಸಮಾಧಾನ ಮಾಡಿಕೊಂಡು, ಆದೇ ತಾನೇ ಮುಂಜಾವಿನ ಗಾಳಿ ಬೀಸುತ್ತಿರಲು, ಮತ್ತೊಂದು ಕಿಟಕಿಯ ಬಳಿ ಕುಳಿತು ಯೋಚಿಸ ತೊಡಗಿದಳು. ತನ್ನ ಸ್ವಂತತಾಯಿ, ಇನ್ನೊಬ್ಬನ ತೆಕ್ಕೆಯಲ್ಲಿ! ಅದೂ ಹೊಸದಾಗಿ ತಮ್ಮ ಮನೆಗೆ ಬಂದವನ ತೆಕ್ಕೆಯಲ್ಲಿ! ಎಂತಹ ಪೈಶಾಚಿಕ ದೃಶ್ಯ! ಇವು ಕಂಡ ದೃಶ್ಯವಾದರೂ ನಂಬಲಾರದಂತಹದಾಗಿದೆ! ಎಂತಹ ಅವಮಾನಕರ, ಅನೀತಿಯುತ, ಅಸಹ್ಯಪರ ವರ್ತನೆ! ಪುಸ್ತಕಗಳಲ್ಲಿ

ಹೆಣ್ಣಿನ ಬಗ್ಗೆ ಬರೆದ, ಇದೇ ಬಗೆಯ ಕತೆಗಳನ್ನು ಇವೆತ್ಳು ಓದಿದ್ದಳು. ಆದರೆ ಅವುಗಳು ಬರಹಗಾರನ ಊಹಾ ಚಿತ್ರಗಳೆಂದೂ, ಸಮಾಜವನ್ನು ಟೀಕಿಸುವ ಕುಹಕ ಪ್ರಯತ್ನಗಳೆಂದೂ ದೂಷಿಸಿದ್ದಳು. ಆದರೆ ಇಂದು ಅವಳು ಕಂಡ ಅವಹೇಳನದ ಆ ದೃಶ್ಯ ಅವಳ ದುಃಖವನ್ನು ಇಮ್ಮಡಿಯಾಗಿಸಿತು. ಮತ್ತೆ ತಾನು ಓದಿದ ಕಾದಂಬರಿಗಳ ಚಿತ್ರಗಳು ಎದುರಿಗೆ ಬಂದು ನಿಂತಂತೆಲ್ಲ, ಅವುಗಳ ವಾಸ್ತವ್ಯತೆ, ಅವು ನಡೆದ ಘಟನೆಗಳ ನೈಜ ಚಿತ್ರಗಳೆಂಬ ವಿಷಯ ಇವಳ ಅನುತಾಪವನ್ನು ಕೊಂಚ ಕಡಿಮೆ ಮಾಡಿತು. ತಾನು ಆ ಬಗೆಯ ಕಥಾಲೋಕದಲ್ಲಿದ್ದಂತೆ ಭಾಸವಾಯಿತು. ಈ ಎಲ್ಲ ಯೋಚನೆಗಳ ಪರಿಣಾಮವಾಗಿ ಇವೆತ್ ಒಂದು ನಿರ್ಧಾರಕ್ಕೆ ಬಂದು ನಿಂತಳು.

"ನನ್ನ ತಾಯಿಯನ್ನು ಈ ಮಾರ್ಗದಿಂದ ತಿರುಗಿಸುವ ಪ್ರಯತ್ನ ಮಾಡುವೆನು. ಈ ಸಂಕಟದಿಂದ ಪಾರಾಗಲು ನನ್ನ ಶಕ್ತಿ ಮೀರಿ ಯತ್ನಿಸುವೆನು. ಆದರ ಮಾರ್ಗವೆಂತು? ಅದನ್ನು ಹೇಗೆ ಸಾಧಿಸಬೇಕು?" ಎಂದು ಅದರ ವಿಷಯವಾಗಿ ಯೋಚಿಸತೊಡಗಿದಳು. ತನ್ನ ತಾಯಿಯೊಂದಿಗೆ ಹೇಗೆ ವರ್ತಿಸಬೇಕು? ಅವಳ ಮುಂದೆ ಆಡಬೇಕಾದ ಮಾತುಗಳೇನು? ಅವಳ ಸವಾಲುಗಳನ್ನು ಹೇಗೆ ಎದುರಿಸಿ, ಅವಳನ್ನು ಸಮಾಧಾನಗೊಳಿಸಬೇಕೆಂಬ ವಿಧಾನಗಳನ್ನೆಲ್ಲ ಅಭ್ಯಾಸ ಮಾಡಿಕೊಂಡಳು.

ಸೂರ್ಯನುದಯಿಸಿ ಅಗಲೇ ಸ್ವಲ್ಪ ಸಮಯವಾಗಿತ್ತು. ಮನೆಯ ಆಳುಮನುಷ್ಯರ ಗಡಿಬಿಡಿ ಆರಂಭವಾಗಿತ್ತು. ತನ್ನ ದಾದಿಯು ಬಂದು ಕಾಣಿಸಿಕೊಂಡಾಗ, "ತಾಯಿಯವರಿಗೆ ನನಗೆ ಕೊಂಚ ದೇಹಾಲಸ್ಯವಾಗಿದೆಯೆಂದು ಹೇಳು. ಮನೆಗೆ ಬಂದಿರುವ ಅತಿಥಿಗಳು ಇಲ್ಲಿಂದ ಹೊರಟು ಹೋಗುವವರೆಗೆ ನಾನು ಈ ಕೋಣೆ ಬಿಟ್ಟು ಹೊರಗೆ ಬರುವುದಿಲ್ಲವೆಂದು ಹೇಳಿಬಿಡು. ಹಾಸಿಗೆಯಿಂದ ನಾನು ಎದ್ದು ಬರುವುದಿಲ್ಲ. ಯಾರೂ ಒತ್ತಾಯ ಪಡಿಸುವ ಕಾರಣವಿಲ್ಲೆಂದು ಸ್ಪಷ್ಟವಾಗಿ ತಿಳಿಸು. ನನಗೆ ವಿಶ್ರಾಂತಿ ಬೇಕಾಗಿದೆ." ಎಂದು ಹೇಳಿದ ಮಾತುಗಳನ್ನು ಕೇಳಿ ದಾದಿಯು ಬಹು ಆಶ್ಚರ್ಯಗೊಂಡಳು.

ಅವಳು ಹಿಂದಿನ ರಾತ್ರಿ ಮಳೆಯಲ್ಲಿ ನಿಂತ ಸಮಯದಲ್ಲಿ ಒದ್ದೆಯಾದ

ಅರಿವೆಗಳನ್ನು ದಾದಿಯು ಸರಿಪಡಿಸುತ್ತಿರುವಾಗ, ತಾಯಿಯಾದ ಓಬಾರ್ದಿಯು ಇವೆತ್‌ಳ ಕೋಣೆಯನ್ನು ಅವಸರದಿಂದ ಪ್ರವೇಶಿಸಿದಳು.

ಅನಿರೀಕ್ಷಿತವಾಗಿ ತಾಯಿಯು ತನ್ನ ಕೋಣೆಯಲ್ಲಿ ಬಂದುದರಿಂದ ಇವೆತ್‌ಳಿಗೆ ಏನೂ ತೋಚದಂತಾಯಿತು. ಇದುವರೆಗೂ ಮಾಡಿಕೊಂಡ ಸನ್ನಾಹವೆಲ್ಲ ನಿಷ್ಫಲವಾಯಿತು. ದುಃಖವು ಆವರಿಸಿತು. ನೈ ಮರೆತು ತಾಯಿಯ ತೋಳ ತೆಕ್ಕೆಗೆ ಬಂದು,"ಅಮ್ಮಾ! ಅಮ್ಮಾ! ''ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

" ಇದೇನು ಇವೆತ್ ? ಹೀಗೇಕೆ ಮಾಡುವೆ ? ಈ ಅಳುವಿನ ಕಾರಣವೇನು ? ಏನಾಯಿತು ಹೇಳು ? ''

ಕೊಂಚ ಯೋಚಿಸಿ ನಿರ್ವಾಹವಿಲ್ಲದೆ " ನಿನ್ನೆ ರಾತ್ರಿ ನಾನು ನಿನ್ನ ಕೋಣೆಯ ಕಿಟಕಿಯ ಬೆಳಕಿನಲ್ಲಿ ನಡೆದ ......" ಎಂದು ಮುಂದೆ ಮಾತು ಬಾರದೆ ಸುಮ್ಮನೇ ಅಳತೊಡಗಿದಳು.

ಓಬಾರ್ದಿಯ ಮುಖ ವಿವರ್ಣವಾಯಿತು. ಆದರೂ ಆವೇಗ ತೋರಗೊಡದೆ " ನನ್ನ ಕೋಣೆಯಲ್ಲಿ ..... ರಾತ್ರಿ..... ಏನು ನೋಡಿದೆ ನೀನು ನೋಡಿದುದಕ್ಕೆ ಇಷ್ಟೇಕೆ ದುಃಖ ಪಡಬೇಕು ? " ಎಂದಳು

" ಅಯ್ಯೋ ಆ ನೋಟ! ಅಯ್ಯೋ ! " ಎಂದು ಮತ್ತೆ ಮತ್ತೆ ಅಳತೊಡಗಿದಳು ಇವೆತ್.

ಇದರಿಂದ ಓಬಾರ್ದಿಯ ಸಂತಾಪ ಹೆಚ್ಚಿದರೂ, ಅದನ್ನು ತೋರಗೊಡದೆ, " ಇದೇನು ಹುಚ್ಚು ? ಸಾಕುಮಾಡು ಈ ಸೋಗಿನ ಆಟವನ್ನು. ಇದು ಸರಿಯಲ್ಲ. ನಿನ್ನ ಈ ವರ್ತನೆ ನನ್ನನು ನಗೆಗೇಡಿಗೆ ಈಡು ಮಾಡುತ್ತದೆ '' ಎಂದು ಕೊಂಚ ಕೋಪದ ಧಾಟಿಯಲ್ಲಿಯೇ ಮಗಳನ್ನು ಬೆದರಿಸಿ ಮಾತನಾಡಿಸಿದಳು.

ಇವೆತ್‌ಳು ದುಃಖದಿಂದ ತಪ್ತಳಾಗಿದ್ದಳು. ಅವಳ ಕಣ್ಣುಗಳಿಂದ ನೀರು ಹರಿಯುತ್ತಿತ್ತು. ಮುಖ ಮುಚ್ಚಿಕೊಂಡು ದುಃಖದಲ್ಲಿದ್ದವಳು, ಧೈರ್ಯದಿಂದ ತಲೆಯೆತ್ತಿ ನಿರ್ಧಾರದ ಧ್ವನಿಯಲ್ಲಿ,"ಅಮ್ಮ! ನನ್ನ ಮಾತನ್ನು ಕೊಂಚ ಕೇಳು. ಹುಚ್ಚಳೆಂದೂ,ಏನೂ ಅರಿಯದವಳೆಂದೂ ನನ್ನ ಮಾತನ್ನು ಅಲ್ಲಗಳೆಯಬೇಡ. ನಿನ್ನೊಡನೆ ಬಿಚ್ಚು ಹೃದಯದಿಂದ ನಾನು ಈಗ

ಮಾತನಾಡಲೇಬೇಕಾಗಿದೆ. ಈ ವಾತಾವರಣ ನನಗೆ ಬೇಸರವೆನಿಸಿದೆ. ಈ ಗೊಂದಲ, ಗಲಭೆ, ಗಡಿಬಿಡಿಯ ಜೀವನ, ಹೇಸಿನಡತೆ, ಎಲ್ಲವೂ ಸರಿಯೆನಿಸುವುದಿಲ್ಲ. ನಾವಿಬ್ಬರೂ ಈ ಜನರಿಂದ ದೂರಸರಿದು ಎಲ್ಲಿಗಾದರೂ ಹೋಗಿಬಿಡುವ. ಯಾವುದೋ ಒಂದು ಹಳ್ಳಿಯಲ್ಲಿ ಸಾಮಾನ್ಯರಂತೆ ಯಾವ ಯೋಚನೆ, ಆಡಂಬರವಿಲ್ಲದೆ ಶಾಂತಿಯಿಂದ ಕಾಲಕಳೆಯುವ. ನಮ್ಮ ಇರುವಿಕೆ, ವಾಸಸ್ಥಾನ ಯಾರಿಗೂ ತಿಳಿಯದಂತಿರಲಿ. ಈ ಘನರೂ ಅಲ್ಲಿಗೆ ಬರಬಾರದು. ನನ್ನ ಈ ಇಚ್ಛೆಯನ್ನು ನೀನು ನಡೆಯಿಸಿ ಕೊಡುವೆಯಾ? ಅಮ್ಮಾ, ಇಲ್ಲವೆನ್ನಬೇಡ. ನನಗೇಕೋ ಬಲು ನೋವಾಗಿದೆ. ನನ್ನ ಹೃದಯವನ್ನು ಅರಿಯುವ ಶಕ್ತಿಯುಳ್ಳ ನೀನು ನನ್ನ ಮಾತನ್ನು ದಯವಿಟ್ಟು ನಡೆಯಿಸಿ ಕೊಡು. ತಾಯಿಯೆಂಬ ಸಲುಗೆಯಿಂದ ಹೀಗೆ ಮಾತನಾಡುತ್ತಿರುವೆನು. ಹೆತ್ತ ತಾಯಿಯಾದ ನೀನು ನನ್ನ ಅಳಲನ್ನು ಅರಿಯಲಾರೆಯಾ? ಮಾತನಾಡು. ತಾಯಿ?" ಎಂದು ದೀನವದನದಿಂದ ಇವೆತ್‌ಳು ಕೇಳಿಕೊಂಡಳು.

ತಾಯಿಯಾದ ಓಬಾರ್ದಿಯು ಮಗಳ ಮಾತುಗಳನ್ನು ಕೇಳುತ್ತ ಗಾಬರಿ ನಿಂತುಬಿಟ್ಟಳು. ಕೋಣೆಯ ನಡುವೆ ನಿಂತ ಓಬಾರ್ದಿಯು ಮಗಳನ್ನು ನುಂಗಿಬಿಡುವಳೇನೋಯೆಂಬ ಆಕ್ರೋಶದಿಂದ ದುರದುರನೆ ನೋಡತೊಡಗಿದಳು. ಅವಳ ತಾಯ್ತನದ ಮಮತೆಯೊಂದು ಕಡೆ, ಮಗಳಿಗೆ ತನ್ನ ಹೀನವರ್ತನೆ ಗೊತ್ತಾಯಿತಲ್ಲವೆಂಬ ಸಂಕಟ ಮತ್ತೊಂದು ಕಡೆ, ಅವಳ ಕರುಳನ್ನು ಹಿಸುಕಿದವು. ತನಗುಂಟಾದ ಪರಾಭವ, ಅವಮಾನ ಅವಳನ್ನು ಹಣ್ಣಾಗಿಸಿದವು. ಮಗಳ ಇಚ್ಛೆಯಂತೆ ನಡೆಯೋಣವೇಯೆಂದು ನಿರ್ಧರಿಸುವ ವೇಳೆಗೆ ಅವಳ ಅಂತಸ್ತು ಐಸಿರಿ, ವೈಭವದ ಜೀವನ, ಶ್ರೀಮಂತರ ಸಹವಾಸ ಮುಂತಾದವುಗಳ ಚಾಪಲ್ಯ ಆ ನಿರ್ಧಾರವನ್ನು ಹೊಡೆದೋಡಿಸಿತು. ಛೆ! ಈ ಸ್ವಲ್ಪ ಮಾತ್ರಕ್ಕೆ ಎದೆ ಗುಂದಬೇಕೆ? ಎಂಬ ಯೋಚನೆ ಬಂದು ಅವಳು ಚೇತರಿಸಿಗೊಂಡಳು.

"ಮಗೂ, ನೀನೇನು ಮಾತನಾಡುತ್ತಿರುವಿ? ನನಗೊಂದೂ ಅರ್ಥವಾಗಲೊಲ್ಲದು?" ಎಂದು ಏನೂ ಅರಿಯದವಳಂತೆ ಮತ್ತೆ ಮಗಳನ್ನು ಕೇಳಿದಳು.

ಮುಗ್ಧಳಾದ ಇವೆತ್‌ಳಿಗೆ ತಾಯಿಯ ಈ ವಂಚನೆಯ ಮಾತುಗಳು ಅರ್ಥವಾಗಲಿಲ್ಲ. ಈ ಪ್ರಶ್ನೆ ಸಹಜವಾಗಿಯೇ ತಾಯಿಯ ಮುಖದಿಂದ ಬಂದಿವೆಯೆಂದು ಭಾವಿಸಿ, ಅದೇ ಸರಳತನದಲ್ಲಿಯೇ "ಅಮ್ಮಾ! ಈ ಮನೆಗೆ ಬಂದಿರುವ ಆಗಂತುಕರನ್ನು ನಾನು ಮತ್ತೊಮ್ಮೆ ನನ್ನ ಕಣ್ಣು ಗಳಿಂದ ನೋಡಲಾರೆ. ಇಲ್ಲಿ ಅವರಲ್ಲಿ ಆ ನಿನ್ನ ಮನುಷ್ಯ ಈ ಮನೆಯಲ್ಲಿ ಇರುವುದಾದರೆ ಇಲ್ಲಿ ನನಗೆ ಸ್ಥಾನವಿಲ್ಲ. ನಮ್ಮಿರ್ವರ ನಡುವೆ ನೀನು ಯಾರಾದರೊಬ್ಬರನ್ನು ಆರಿಸಲೇ ಬೇಕು. ಅವರ ಮುಖವನ್ನು ನೋಡುತ್ತ ನಾನೊಂದು ನಿಮಿಷವೂ ಇಲ್ಲಿ ಇರಲಾರೆ. ನಿನಗೆ ಅವರೇ ಬೇಕೆನಿಸಿದರೆ ನಾನೇ ಈ ಮನೆಯನ್ನು ತೊರೆದು ಹೋಗುವೆನು. ಇದು ನನ್ನ ನಿರ್ಧಾರ." ಎಂದು, ಇವೆತ್‌ಳು ಈ ಮಾತುಗಳನ್ನು ಹಾಸಿಗೆಯ ಮೇಲೆ ಕುಳಿತು ನಾಟಕದ ಪಾತ್ರದಂತೆ ಆವೇಶದಿಂದ, ಅಧಿಕ ಅಭಿಮಾನದಿಂದ ಹೇಳಿ, ಇಲ್ಲಿಯವರೆಗೂ ಅಡಗಿಕೊಂಡಿದ್ದ ದುಃಖವು ತುಂಬಿ ಬರಲು, ದಿಂಬಿಗೆ ತಲೆಕೊಟ್ಟು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಓಬಾರ್ದಿಯು ಏನನ್ನೂ ಹೇಳದೇ ಮಗಳ ಕಡೆ ಸುಮ್ಮನೆ ನೋಡುತ್ತ "ಹುಚ್ಚೀ, ಹುಚ್ಚಿ. ಏನೀ ಹುರುಳಿಲ್ಲದ ಹರಟೆ? ಸುಮ್ಮನಾಗು." ಎಂದಳು.

"ಇಲ್ಲಮ್ಮ. ಇದು ಸುಮ್ಮನೇ ಕುಳಿತು ಬಿಡುವ ವಿಚಾರವಲ್ಲ. ಅವರು ಈ ಮನೆಯಿಂದ ಈಗಲೇ ಹೊರಗೆ ಹೋಗಬೇಕು. ಇಲ್ಲವಾದರೆ ನಾನೇ ಹೋಗಿ ಬಿಡುವೆನು."

"ಎಲ್ಲಿಗೆ ಹೋಗುವೆ? ಹೋಗುವುದಾದರೂ ಎಲ್ಲಿಗೆ?"

"ಎಲ್ಲಿಗೋ! ದಾರಿ ಕಂಡು ಬಂದತ್ತ. ನಾನೋರ್ವ ಪ್ರಾಮಾಣಿಕ ಮನೆತನದ ಹೆಣ್ಣಿನಂತೆ ಜೀವಿಸಬೇಕೆಂದಿರುವೆನು ನನಗೆ ಈ ಬಗೆಯ ಹೊಲಸು....ಬೇಡ, ತಾಯಿ."

ಈ ಮಾತುಗಳು ಓಬಾರ್ದಿಗೆ ಶೂಲದಂತೆ ನಾಟಿದವು. ಅವಳು ರೊಚ್ಚಿಗೆದ್ದು "ಸಾಕು ಮಾಡು ನಿನ್ನ ಈ ಹಾಳು ಹರಟೆ. ನನ್ನೆದುರು ಇಷ್ಟು ದೂರ ಮಾತನಾಡಲು ನಿನಗೆ ಅವಕಾಶ ಕೊಟ್ಟುದೇ ತಪ್ಪಾಯಿತು. ಅಳತೆ ಮೀರಿ ಮಾತನಾಡುವ ನಿನ್ನ ಉದ್ಧಟತನಕ್ಕೇನೆನ್ನಬೇಕು? ನನ್ನ ವರ್ತನೆಯಲ್ಲಿ ನೀನು ಕಂಡುಕೊಂಡ ದುರ್ಗುಣವಾದರೂ

ಏನು? ನನ್ನ ನಡತೆ ಸಾಮಾನ್ಯ ಸ್ತ್ರೀಯರಂತೆ ಇದೆ. ಯಾರು ಬಂದು ದೂರುವರೋ ನೋಡುವ. ನನ್ನ ಈ ಬಗೆಯ ಜೀವನ ಕೆಲವರಿಗೆ ರುಚಿಸದೆ ಇರಬಹುದು. ಆದರೆ, ಅವರ ರುಚಿ ಅರುಚಿಗಳಿಂದ ನನಗೇನು ಪ್ರಯೋಜನ? ಈ ಬಗೆಯ ಜೀವನ ನಡೆಸಸುವುದರಲ್ಲಿ ನನಗೆ ಹೆಮ್ಮೆಯೆನಿಸುತ್ತಿದೆ. ನಮ್ಮ ಸಮಾಜದಲ್ಲಿಯ "ಪ್ರಾಮಾಣಿಕ ಸ್ತ್ರೀ''ಯೆನಿಸಿಕೊಂಡ ಸ್ತ್ರೀಯರಿಗಿಂತಲೂ ನನ್ನ ವರ್ತನೆ ಯಾವ ರೀತಿಯಿಂದಲೂ ಅಸಹ್ಯವಲ್ಲವೆಂದು ನನ್ನ ನಂಬಿಕೆ." ಎಂದು ಕೋಪದಿಂದ ನುಡಿದಳು

ಓಬಾರ್ದಿಯು ಈ ನಿರ್ಭಿಡಿಯದ, ಸೊಕ್ಕಿನ ಮಾತುಗಳು ಆಶ್ಚರ್ಯಕರವಾಗಿದ್ದವು. ತನ್ನ ತಾಯಿಯು ಏನು ನುಡಿಯುತ್ತಿರುವಳೆಂಬುವುದನ್ನು ಕುತೂಹಲದಿಂದ ಇವೆತ್‌ಳು ಕೇಳುತ್ತಿದ್ದಳು. ಆವಳ ತಲೆ ಸಮ ಸ್ಥಿತಿಯಲ್ಲಿರಲಿಲ್ಲ. "ಇದೇನಮ್ಮಾ!" ಎಂದು ಆಶ್ಚರ್ಯದಿಂದ ಅವಳು ನುಡಿಯಲು, ಓಬಾರ್ದಿಯು ತನ್ನ ಮಾತುಗಳನ್ನು ಅದೇ ಆವೇಗದಲ್ಲಿಯೇ ಮುಂದುವರಿಸಿ, "ಅಹುದು. ನನ್ನ ಈ ರೀತಿಯ ಜೀವನ ಕ್ರಮ ಕೆಲವರಿಗೆ ಅಸಹ್ಯವೆನಿಸಿದೆ. ಆದರೇನು? ಹಾಗೆ ಅಪಹಾಸ್ಯಮಾಡುವವರು ತಮ್ಮ ಜೀವನದ ಕ್ರಮವನ್ನು ಪರೀಕ್ಷಿಸಿ ನೋಡಿಕೊಳ್ಳಲಿ. ನನಗೇನೂ ನಾಚಿಕೆಯೆನಿಸುವುದಿಲ್ಲ. ಈ ಬಗೆಯಾಗಿ ನಾನು ನಡೆದುಕೊಳ್ಳದಿದ್ದರೆ ನಿನ್ನ ಗತಿ ಏನಾಗುತ್ತಿತ್ತು? ಯಾರ ಮನೆಯಲ್ಲಿಯೋ ಅಡುಗೆಯವಳಾಗಿ, ಮಾನ ಮರ್ಯಾದೆಗಳನ್ನು ತೊರೆದು ಕಷ್ಟದ ಜೀವನ ನಡೆಸಬೇಕಾಗುತ್ತಿತ್ತು. ನನ್ನ ಹಿಂದಿನ ಜೀವನವನ್ನು ನೆನಪು ಮಾಡಿಕೊಂಡರೆ, ಈಗಲೂ ಎದೆ ಧಸ್ಸೆನ್ನುತ್ತದೆ. ತಿಂಗಳಿಗೆ ಮೂವತ್ತು ಸೋಗಳಿಂದ (Sous-ಫ್ರೆಂಚ್ ನಾಣ್ಯ) ನಾನು ಜೀವಿಸುತ್ತಿದ್ದೆ. ಅದೇ ರೀತಿಯಲ್ಲಿ ನಾನು ಮುಂದರಿದಿದ್ದರೆ, ನೀನು ಹೀಗೆ ಮಹಾರಾಣಿಯಂತೆ ಜೀವಿಸಲು ಶಕ್ಯವಾಗುತ್ತಿತ್ತೇ? ದಿನವೂ ಚಾಕರಿ ಮಾಡಿ, ಯಾರ ಮನೆಗೆಲಸದಿಂದಲೋ,ದಾದಿಯ ಕೆಲಸದಿಂದಲೋ,ನೀನು ಜೀವಿಸಬೇಕಾಗಿತ್ತು. ದಿನವೂ ದುಡದು ದುಡಿದು ಹಣ್ಣಾಗಿ ಒಂದೊಂದು ಸಲ ಕೆಲಸವಿಲ್ಲದೇ ಮಾನವನ್ನು ಕಳೆದುಕೊಂಡು ನರಳಬೇಕಾಗಿತ್ತು.ಅನಂತರ ನೀನು ಮುದುದಯಾಗಿದ್ದರೆ ಮಕ್ಕಳು, ಅದರೊಂದಿಗೆ ದಾರಿದ್ರ್ಯ ನಿನ್ನನ್ನು ಕಾಡಿ, ಹಣ್ಣಾಗಿಸುತ್ತಿದ್ದುವು.ನಿನ್ನ ಜೀವನದಲ್ಲಿ ಸುಖ ಸಂತೋಷ

ಕ್ಕಿಂತಲೂ, ನೋವು ಕಷ್ಟಗಳೇ ಹೆಚ್ಚಾಗುತ್ತಿದ್ದವು. ಈಗ ನಿನ್ನಲ್ಲಿರುವ ಶರೀರ ಸೌಂದರ್ಯ, ಆನಂದ, ಉಲ್ಲಾಸ, ಸುಖಭೋಗಗಳು ಕನಸಿನ ಮಾತಾಗಿಯೇ ಉಳಿಯುತ್ತಿದ್ದವು. ಸುಖ ಜೀವನ ಬೇಕೆಂದರೆ ನಾನು ಹಿಡಿದ ಮಾರ್ಗವೇ ಸರಿ. ಇದರಲ್ಲಿ ನಾಚಿಕೆಯ ಮಾತೆಲ್ಲಿದೆ? ಸೋಗಿನ ಕಂತೆ ಎಲ್ಲಿ ಬಂತು? ಅನುಮಾನ ಅಸಹ್ಯವೇಕೆ?

" ಮಗೂ, ನಮ್ಮ ಮುಂದೆ ಉಳಿದಿರುವುದು ಈಗ ಒಂದೇ ಮಾರ್ಗ. ಇದರಲ್ಲಿ ಸಂಶಯಕ್ಕೆ ಎಡೆಗೊಡಬೇಡ. ಸಾಯುವವರೆಗೂ ದುಃಖದಲ್ಲಿದ್ದು, ಸಂಸಾರಿಗಳಂತೆ ಜೀವಿಸಬೇಕು. ಇಲ್ಲವೆ ಸುಖ, ಆನಂದ, ಭೋಗ, ಲಾವಣ್ಯ ಗಳಿಂದ ತುಳುಕಾಡುವ ರಸಮಯವಾದ ಮಾರ್ಗವನ್ನು ಅನುಸರಿಸಬೇಕು. ಇವೆರಡರಲ್ಲಿ ನಿನಗೆ ಯಾವುದು ಬೇಕು ಹೇಳು?

" ಇವೆತ್, ಇಷ್ಟು ದಿನ ನಾನು ಎಲ್ಲ ಬಗೆಯ ಆಗುಹೋಗುಗಳನ್ನು, ದುಃಖ ಸಂತಾಪಗಳನ್ನು, ನೋವು ಪರಾಭವಗಳನ್ನು ಸಹಿಸಿ, ನಿನ್ನ ಜೀವನ ಸುಖವಾಗಲೆಂದು, ನೀನು ಅನುಪಮ ಸುಂದರಿಯಾಗಿ ರಾಜಕನ್ಯೆಯಾಗ ಲೆಂದು, ಈವರೆಗೆ ನಿನಗಾಗಿ ದುಡಿದು ಹಣ್ಣಾಗಿ, ನಿನ್ನನ್ನು ಈ ಅಂತಸ್ತಿ ನಲ್ಲಿ ರಾಣಿಯಂತೆ ಇರಿಸಿದ್ದೇನೆ.

" ನಿನ್ನ ಆ " ಪ್ರಾಮಾಣಿಕ ಸ್ತ್ರೀ''ಯರ ಜೀವನದ ರಹಸ್ಯ ನಿನ ಗೇನು ತಿಳಿದಿದೆ? ಅವರು ತೆರೆಯ ಮರೆಯಲ್ಲಿ ನಡೆಸುವ ಜಾರತನ, ದಿನದ ಸುಖ ಜೀವನಕ್ಕೆಂದು ಅವರು ಪಡುವ ಕಷ್ಟನಷ್ಟಗಳನ್ನು, ದಿನದಜೀವನಕ್ಕೆ ಬೇಕಾದ ಸಾಮಾನ್ಯ ಪದಾರ್ಥಗಳನ್ನು ದೊರಕಿಸಲಾರದೆ ವ್ಯಥೆಪಟ್ಟು ದುಃಖಿಸುವ ದೃಶ್ಯಗಳನ್ನು ನಾನು ಕಾಣದೇ ಇಲ್ಲ. ಇಂತಹ ಸ್ತ್ರೀಯರು ತೋರಿಕೆಗೆ ಸಾಮಾನ್ಯ ಸ್ತ್ರೀಯರಂತೆ ಇದ್ದರೂ ತಮ್ಮ ಮಾನವನ್ನು ಸ್ವಲ್ಪೇ ಲಾಭಕ್ಕೆ ಮಾರಿಕೊಳ್ಳುವ ಅವರ ಪೊಳ್ಳುತನ ನನಗೆ ತಿಳಿದೇಇದೆ. ಉಂಡು ಉಣಲು ಸಾಕಷ್ಟಿದ್ದರೂ, ನೀಚ ವೃತ್ತಿಯನ್ನು ಕೇವಲ ತಮಾಷೆಗೆಂದು ಅನುಸರಿಸುವ ಇನ್ನೂ ಕೆಲವರ ಪೊಳ್ಳುತನದ ವಿವರಗಳು ನನಗೆಲ್ಲ ತಿಳಿ ದಿವೆ. ಅವರಂತಹ ನೀಚರು ಮತ್ತಾರೂ ಇರಲಿಕ್ಕಿಲ್ಲವೆಂದು ನನ್ನ ನಂಬಿಕೆ" ಎಂದು ಉಪನ್ಯಾಸದ ಧೋರಣೆಯಲ್ಲಿ ಆಡಿದ ಓಬಾರ್ದಿಯ ಮಾತುಗ ಳನ್ನು ಕೇಳುತ್ತ ಕುಳಿತಿದ್ದ ಇವೆತ್‌ಳಿಗೆ ಎಲ್ಲಿಯೂ ಇಲ್ಲದ ದುಃಖ ತುಂಬಿ

ಕೊಂಡು ಬರಲು ಅದನ್ನು ತಡೆಯಲಾರದೆ, ಚಬುಕಿನ ಹೊಡೆತ ತಿಂದು ಅಳುವ ಮಕ್ಕಳಂತೆ ಬಿದ್ದು ಬಿದ್ದು ಅಳತೊಡಗಿದಳು. ಇನ್ನಾವ ದಿಕ್ಕೆಂದು ಒಮ್ಮೊಮ್ಮೆ ಅವಳ ಮೂಕ ನೋಟ ಸೂಚಿಸುತ್ತಿತ್ತು. ಆದರೆ ಅವಳು ಮರುಕ್ಷಣದಲ್ಲಿ ಹಿಸ್ಟೀರಿಯಾ ರೋಗಪೀಡಿತರಾದ ನಾರಿಯರಂತೆ ಮೂಕ ದುಃಖದಲ್ಲಿ ಮುಳುಗುತ್ತಿದ್ದಳು.

ಇವೆತ್‌ಳ ದುಃಖವನ್ನು ದೂರದಿಂದಲೇ ನೋಡುತ್ತ ನಿಂತಿದ್ದ ತಾಯಿಯಾದ ಓಬಾರ್ದಿಯು ಆ ಸನ್ನಿವೇಶದಲ್ಲಿ ಎಲ್ಲಿಯೂ ಇಲ್ಲದ ಆವೇಶಕ್ಕೊಳಗಾಗಿ, ತಾನು ಅನುಸರಿಸಿದ ಮಾರ್ಗದ ಬಗ್ಗೆ ಪಶ್ಚಾತ್ತಾಪ ಉಂಟಾಗಿ, ನಿಜವನ್ನು ನುಡಿಯುವ ಮಗಳ ಮಾತಿನಲ್ಲಿ ವಿಶ್ವಾಸ ತಲೆದೋರಲು, ಮಗಳ ದೀನಾವಸ್ಥೆಯನ್ನು ಕಂಡು ಅವಳ ಮನಸ್ಸು ಕರಗಿ ನೀರಾಯಿತು. ಅವಳ ಕಷ್ಟದ ಬಗ್ಗೆ ಮನದಲ್ಲಿಯೇ ಮರುಗಿದಳು. ಆವೇಶದಿಂದ ಓಡಿಹೋಗಿ ಮಗಳನ್ನು ತಬ್ಬಿಕೊಂಡು ತಾನೂ ಅಳತೊಡಗಿದಳು. “ನನ್ನ ಅರಗಿಳಿಯೇ! ನನ್ನ ಮುದ್ದು ಗಿಳಿಯೆ ಅಳಬೇಡ. ನೆನಗಾಗುತ್ತಿರುವ ವ್ಯಥೆಯೆಂತಹದೆಂಬದನ್ನು ಅರಿಯೆ. ನಿನ್ನನ್ನು ದೂಷಿಸಿದರೇನು ಪ್ರಯೋಜನ? ಅಯ್ಯೋ ನನ್ನ ಮಗು!” ಎಂದು ಇಬ್ಬರೂ ಅಳತೊಡಗಿದರು. ಹೀಗೆ ಇಬ್ಬರೂ ಕೆಲ ಸಮಯ ಕಣ್ಣೀರು ಸುರಿಸುತ್ತ ಕಾಲಕಳೆದರು.

ಸ್ವಲ್ಪ ಸಮಯದ ನಂತರ ಓಬಾರ್ದಿಯು ತೊಯ್ದ ಕಣ್ಣುಗಳನ್ನು ಕರವಸ್ತ್ರದಿಂದ ಒರಸಿಕೊಳ್ಳುತ್ತ, ಮೆಲ್ಲನೆ ಎದ್ದುನಿಂತು ಮೆಲುದನಿಯಲ್ಲಿ “ಸುಮ್ಮನಾಗು ಮಗಳೆ. ಸುಮ್ಮನೇ ದುಃಖಿಸಿದರೇನು ಪ್ರಯೋಜನ? ನಮ್ಮ ಜೀವನ ಹೀಗಾದುದು ಅನಿವಾರ್ಯ. ನಮ್ಮ ಬಾಳು ಹೀಗೆಂದು ಮೊದಲೇ ತೀರ್ಮಾನವಾಗಿದೆ. ಯಾವುದನ್ನೂ ನಾವು ಬದಲಾಯಿಸಲಾರೆವು. ಸಮಯ ಬಂದಂತೆ, ಗಾಳಿಬೀಸಿದಂತೆ ಅವುಗಳಿಗೆ ಅನುಗುಣವಾಗಿ ವರ್ತಿಸಬೇಕಾದುದು ನಮ್ಮ ಕರ್ತವ್ಯ. ಸುಮ್ಮನೇ ತರ್ಕಿಸುವುದರಲ್ಲೇನಿದೆ?” ಎಂದು ಸಂತೈಸಿದರೂ ಇವೆತ್‌ಳ ಅಳು ಮುಗಿಯಲಿಲ್ಲ. ಅವಳಿನ್ನೂ ದುಃಖಿಸುತ್ತಲೇ ಇದ್ದಳು. ಅಂದು ಅವಳು ಕಂಡ ದೃಶ್ಯಗಳ ಪರಿಣಾಮ ಅವಳ ಎಳೆಮನಸ್ಸಿನ ಮೇಲೆ ಹೆಚ್ಚಿನ ದುಃಖವನ್ನುಂಟು ಮಾಡಿದ್ದವಲ್ಲದೆ, ಅವಳನ್ನು ಬಹುವಾಗಿ ನೋಯಿಸಿದ್ದವು. ಎಂದೂ ಕಾಣದ ಆ ದೃಶ್ಯ ತಾಯಿಯ ಹಾದರತ

ನದ ಅರಿವು ಅವಳ ಹೃದಯದಲ್ಲಿ ಅತೀವವಾದ ಗಾಯವನ್ನುಂಟು ಮಾಡಿತ್ತು. ತಾಯಿಯಾದ ಓಬಾರ್ದಿಯಂತೆ ಬಹುಬೇಗ ಮರೆತು ಬಿಡುವ ಸ್ವಭಾವ ಅವಳದಾಗಿದ್ದಿಲ್ಲ. ಆದರೂ ಓಬಾರ್ದಿಯು "ಇವೆತ್, ಏಳು ಕೆಳಗೆ ಉಪಾಹಾರ ಸಿದ್ಧವಾಗಿದೆ. ತಡಮಾಡುವುದು ಒಳಿತಲ್ಲ. ಅತಿಥಿಗಳು ಕಾಯುತ್ತಿರ ಬಹುದು. ಮುಖತೊಳೆದುಕೊಂಡು ಬೇಗ ಬಂದುಬಿಡು" ಎಂದು ಸಂತೈಸಿದಳು ಅದಾಗದು ಎಂಬಂತೆ ತಲೆಯನ್ನು ಮೌನದಲ್ಲಿಯೇ ಆಡಿಸುತ್ತ, ದುಃಖದ ಆವೇಗದಿಂದು ಬಿಕ್ಕುತ್ತ ಮಾತುಬಾರದಿರಲು. "ಇಲ್ಲಮ್ಮ! ನನ್ನ ನಿರ್ಧಾರ ನಾನು ಬದಲಾಯಿಸುವುದಿಲ್ಲ. ನಿನ್ನೆ ಬಂದ ಅತಿಥಿಗಳು ಇಲ್ಲಿಂದ ಹೊರಟು ಹೋಗುವ ವರೆಗೆ ನಾನು ಈ ಕೋಣೆ ಯಿಂದ ಹೊರಗೆ ಬರುವುದೇ ಇಲ್ಲ; ಅವರು ನಾಳೆ ಹೋದ ನಂತರವೇ ನಾನು ಹೊರಗೆ ಬರುವೆನು ಅವರಿಬ್ಬರೂ ಮತ್ತೆ ಬರುವುದಾದರೆ, ನಾನು ಈ ಮನೆಯಲ್ಲಿರುವುದಿಲ್ಲ. ಈ ನನ್ನ ನಿಶ್ಚಯವನ್ನೂ ಯಾವಸಮಯಕ್ಕೂ ಬದಲಾಯಿಸುವುದಿಲ್ಲ. ಇದು ಖಂಡಿತ." ಎಂದು ಹೇಳಿದ ಮಾತಿಗೆ ಓಬಾ ರ್ದಿಯು ಬಹು ನೊಂದುಕೊಂಡು, ಮುಂದೆ ತನ್ನ ಆಟವು ಸಾಗದೆಂದು ನಿಶ್ಚಯಿಸಿ "ಇವೆತ್ ನಿನ್ನನ್ನು ಕೇಳಿಕೊಳ್ಳುತ್ತೇನೆ. ನನ್ನ ಮಾನವನ್ನು ಕಾಪಾಡು. ನಿನ್ನ ಈ ನಿರ್ಧಾರವನ್ನು ಬದಲಾಯಿಸಮ್ಮಾ." ಎಂದು ಬೇಡಿ ಕೊಂಡಳು.

ಇವೆತ್‌ಳು ಎನನ್ನೂ ಮಾತನಾಡದೇ ಸುಮ್ಮನಿದ್ದುದನ್ನು ಕಂಡು ಓಬಾರ್ದಿಯು "ಆಯಿತು, ಇವೆತ್. ನೀನು ಇಂದು ಹೊರಗೆ ಬರುವುದೇ ಬೇಡ. ಬಹಳ ದಣಿದಿರುವಿ. ವಿಶ್ರಾಂತಿಯನ್ನು ಪಡೆ. ಮತ್ತೆ ಮಧ್ಯಾಹ್ನ ಬಂದು ನಿನ್ನನ್ನು ಕಾಣುವೆನು. ದುಃಖಿಸಬೇಡ" ಎಂದು ಮಗಳ ಹಣೆ ಯನ್ನು ಮುದ್ದಿಟ್ಟು ಅವಳು ಬಹು ಸುಲಭವಾಗಿ ತನ್ನ ಹಾದಿಗೆ ಬಂದ ಳೆಂದು ನೆನೆದು ಓಬಾರ್ದಿಯು ತನ್ನ ಕೋಣೆಗೆ ಹೋದಳು.

ತಾಯಿಯು ಹೋದನಂತರ ಇವೆತ್‌ಳು ತನ್ನ ಕೋಣೆಯ ಚಿಲಕ ಹಾಕಿ ಬಾಗಿಲನ್ನು ಭದ್ರಪಡಿಸಿಕೊಂಡು ಬಂದು ಮಂಚದಮೇಲೆ ಕುಳಿತು ಮತ್ತೆ ಯೋಚಿಸತೊಡಗಿದಳು. ಹನ್ನೊಂದು ಗಂಟೆ ಹೊತ್ತಿಗೆ ಮನೆಯ ಹೆಣ್ಣಾಳು ಬಾಗಿಲಬಳಿನಿಂತು "ನಿಮಗೆ ಊಟಕ್ಕೆ ಏನುಬೇಕು?" ಎಂದು

ಕೇಳಿದಳು. ಕೊಂಚ ಸಮಯ ಸುಮ್ಮನಿದ್ದು ಅವಳು ಮತ್ತೆ ಒತ್ತಾಯಪಡಿಸಲು, ಬಾಗಿಲ ಹತ್ತಿರ ಬಂದು “ ನನಗೇನೂ ಬೇಕಾಗಿಲ್ಲ. ನನ್ನನ್ನು ಯಾರೂ ಮಾತನಾಡಿಸದೆ ಸುಮ್ಮನೇ ಬಿಟ್ಟರೆ ಸಾಕು. ನನಗೆ ಹಸಿವಿಲ್ಲ. ಹೊರಡು” ಎಂದು ಹೇಳಿ ಕಳುಹಿದಳು. ಮುಂಜಾನೆ ಹತ್ತು ಗಂಟೆಯ ಗಾಡಿಗೆ ಸರ್‌ವೀನ್ನೀಯು ಮತ್ತು ಸಾವಾಲ್‌ರು ನಿರಾತೆಪಟ್ಟು ಪ್ಯಾರಿಸಕ್ಕೆ ಹೋಗಿದ್ದರು. ಇವೆತ್‌ಳನ್ನು ಮತ್ತೆ ಯಾರೂ ಮಾತನಾಡಿಸಲಿಲ್ಲ. ಮಧ್ಯಾನ್ಹ ಮೂರುವರೆ ಗಂಟೆಗೆ ಯಾರೋ ಬಾಗಿಲ ಬಡಿದ ಸದ್ದಾಯಿತು.

“ ಯಾರದು ? ”

“ ನಾನು ಮಗುವೆ; ನಿನ್ನ ದೇಹಸ್ಥಿತಿ ಹೇಗಿವೆ ಈಗ ? ನಿನಗೇನು ಬೇಕು. ? ” ಎಂದು ಓಬಾರ್ದಿಯು ಕೇಳಿದಳು.

ಸ್ವಲ್ಪ ಯೋಚಿಸಿ, ಬಾಗಿಲು ತೆರೆದು ಮತ್ತೆ ಹಾಸಿಗೆಯ ಮೇಲೆ ಮಲಗಿದಳು. ಓಬಾರ್ದಿಯು ಮಗಳನ್ನು ಸಮೀಪಿಸಿ ಆದರದ ಧ್ವನಿಯಲ್ಲಿ “ ಈಗ ನಿನಗೆ ಹೇಗಿವೆ? ಸ್ವಲ್ಪ ಏನಾದರೂ ಆಹಾರ ಸೇವಿಸುವೆಯಾ? ”

“ ಏನೂ ಬೇಡಮ್ಮಾ !”

ಮಗಳ ಮೈ ಸವರುತ್ತ, ಮಾತನಾಡಿಸಲು ಯತ್ನಿಸಿದಳು. ಇವೆತ್‌ಳು ಮುಖವನ್ನತ್ತ ಕಡೆ ತಿರುವಿ ಮಲಗಲು ಅವಳನ್ನು ಅಲುಗಾಡಿಸಿ ತನ್ನ ಕಡೆ ತಿರುಗುವಂತೆ ಮಾಡಿ, “ ಇವೆತ್, ಇದೇನು ನಿನ್ನ ಮೌನ ? ಈ ಬಗೆಯ ಸತ್ಯಾಗ್ರಹ ಸರಿಯಲ್ಲ. ಹೀಗೆ ಹಾಸಿಗೆ ಹಿಡಿದು ಮಲಗುವುದು ಹಿತವಲ್ಲ. ಇಂದು ನೀನು ಏಳುವುದೇ ಇಲ್ಲವೇ? ಅವರಿಬ್ಬರೂ ಪ್ಯಾರಿಸ್‌ಗೆ ಹೋಗಿರುವರು. ಏಳಮ್ಮ” ಎಂದು ಕೇಳಿಕೊಂಡಳು.

“ ಈಗ ಎದ್ದು ಹೊರಗೆ ಬರುವೆ.” ಎಂದು ಹೇಳಿ ಮತ್ತೇನನ್ನೋ ಯೋಚಿಸುವ ಭಂಗಿಯಲ್ಲಿ ಕುಳಿತು, ತಾಯಿಯತ್ತ ಮುಖ ತಿರುವಿ “ ಇಲ್ಲಿ ನೋಡಮ್ಮಾ....ನಾನು ಎಲ್ಲ ವಿಧವಲ್ಲಿಯೂ ಯೋಚಿಸಿದ್ದೇನೆ. ಇದೇ ನನ್ನ ಕೊನೆಯ ನಿರ್ಧಾರ. ಹಿಂದೆ ನಡೆದು ಹೋದುದು ನಡೆದು ಹೋಯಿತು. ಅದನ್ನು ಮತ್ತೆ ಕೆಣಕುವುದು ಸರಿಯಲ್ಲ. ಆದರೆ ಇನ್ನು ಮುಂದೆ ನಡೆಯುವ ನನ್ನ ವರ್ತನೆ ತೀರ ಹೊಸಬಗೆಯದಾಗುವುದು. ನನಗೆ ತೋಚಿದಂತೆ ನಡೆದುಕೊಳ್ಳಲು ನನ್ನನ್ನು ಬಿಟ್ಟು ಬಿಡು. ದಯವಿಟ್ಟು ನನ್ನನ್ನು ನಿವಾರಿ

ಸಬೇಡ. ನಾನೇನು ಮಾಡಬೇಕೆಂಬುದನ್ನು ಆಗಲೇ ನಿರ್ಧರಿಸಿದ್ದೇನೆ. ಅದರ ವಿಷಯವಾಗಿ ಈಗ ನಾನು ಏನೂ ಹೇಳಬಯಸುವುದಿಲ್ಲ." ಎಂದಳು.

ತಾಯಿಯಾದ ಓಬಾರ್ದಿಯ ಸ್ಥೈರಣೆ ಮೀರುವಂತಿತ್ತು. ಅವಳು ಕೋಪದಿಂದ ಸಂತಪ್ತಳಾಗಿದ್ದಳು. ಮಗಳನ್ನು ಬೈದು ರಗಳೆ ಮಾಡಬೇಕೆಂದು ನೆನೆದಳು. ಆದರೆ ಕೊಂಚ ಯೋಚಿಸಿ, ದುಡುಕುವುದು ಸರಿಯಲ್ಲವೆಂದು ನಿರ್ಧರಿಸಿ ಎದ್ದು ನಿಂತು, "ನೀನಿನ್ನು ಏಳಬಹುದಲ್ಲವೆ?'' ಎಂದು ಕೇಳಿದಳು.

"ಈಗಲೇ ಸಿದ್ಧಳಾಗುವೆನು."

ತಾಯಿಯುನೆರವಿನಿಂದ ತನ್ನ ಅಲಂಕಾರವನ್ನು ಮುಗಿಯಿಸಿ ಹೊರಡಲು ನಿಂತಿರಲು, ಓಬಾರ್ದಿಯು ಅವಳ ಹಣೆಯನ್ನು ಮುದ್ದಿಟ್ಟು "ಮಗೂ ರಾತ್ರಿ ಊಟದ ಮುಂಚೆ ಕೊಂಚ ಹೊರಗೆ ಅಡ್ಡಾಡಿ ಬರುವುದು ಒಳಿತಲ್ಲವೆ?'' ಎಂದು ಕೇಳಿದಳು.

"ಆಗಲಮ್ಮ. ಸ್ವಲ್ಪ ಅಡ್ಡಾಡಲು ಹೋಗುವ" ಎಂದಳು. ಇಬ್ಬರೂ ಸಂಜೆ ಅಡ್ಡಾಡಿ ಬಂದು ರಾತ್ರಿ ಊಟ ಮುಗಿಯಿಸಿ ಮಲಗಿದರು.

೪

# ಸಮಸ್ಯೆಯ ಪರಿಹಾರ

ಮಾರನೆಯ ದಿನ ಮುಂಜಾನೆ ಇವೆತ್‌ಳೊಬ್ಬಳೇ ಹೊರಬಿದ್ದು, ಹಿಂದೆ ಆ ನದಿಯ ದಡದಲ್ಲಿ ಹಸಿರು ಹುಲ್ಲಿನ ಬಯಲಿನಲ್ಲಿ ಇರುವೆಗಳ ಬಗ್ಗೆ ಪ್ರಬಂಧವನ್ನು ಓದಿದ ಸ್ಥಳವೇ, ಮುಂದಿನ ಆಲೋಚನೆಗೆ ಒಳ್ಳೆಯದೆಂದು ಬಗೆದು ಅಲ್ಲಿಗೆ ಹೋಗಿ ಕುಳಿತು "ಈ ದಿನ ನಾನು ಯಾವುದಾದರೂ ಒಂದು ನಿರ್ಣಯಕ್ಕೆ ಬಾರದ ಹೊರತು ಇಲ್ಲಿಂದ ಹೊರಡುವುದಿಲ್ಲ." ಎಂದು ಮನದಲ್ಲಿಯೇ ನಿಶ್ಚಯಿಸಿಕೊಂಡು ಯೋಚಿಸತೊಡಗಿದಳು.

ಕಣ್ಣೆದುರು ತಾನು ಕಾಲು ಚಾಚಿ ಕುಳಿತ ಸ್ಥಳದಲ್ಲಿ ನದಿಯ ನೀರು ಪಳಪಳನೆಂದು ತಿಳಿಯಾಗಿ ಹರಿಯುವ ಸದ್ದು ಕೇಳಿಸುತ್ತಿತ್ತು. ಆ ನೀರಿನಲ್ಲಿರುವ ಸ್ವಚ್ಛತೆ ಇವೆತ್‌ಳಿಗೆ ಎಲ್ಲಿಯೂ ಇಲ್ಲದ ಆನಂದವನ್ನುಂಟು ಮಾಡಿ ತನ್ನ ಪಾತಿವ್ರತ್ಯದ ಪರೀಕ್ಷಾ ಸಮಯ ಬಂದಿದೆ ಎಂದು ಸೂಚಿಸುತ್ತಿರುವುದೆಂದು ಭಾವಿಸಿದಳು. ಇಂತಹ ಇಕ್ಕಟ್ಟಿನ ಪ್ರಸಂಗದಲ್ಲಿ ಜಯಶೀಲಳಾಗುವುದು ಒಂದು ಮಹತ್ವದ ವಿಷಯವೆಂದೂ, ಅದು ಸ್ತ್ರೀ ಜನಾಂಗಕ್ಕೇನೇ ಒಂದು ಮಾದರಿಯ ನಿರ್ಣಯ ವಾಗಬೇಕೆಂದೂ ಅವಳ ಹೆಬ್ಬಯಕೆಯಾಗಿತ್ತು. ಇಂದು ತನಗೊದಗಿರುವ ವಿಪತ್ತು ಎಲ್ಲ ಯುವತಿಯರಿಗೂ ಬಂದೊದಗಬಹುದೆಂದು ನೆನೆದಳು. ಹಣದಾಸೆಯ, ಭೋಗಲಾಲಸೆಯ, ಸಂಪತ್ತಿನ ವಿಷಯ ಲಾಲಸೆಯ ಹಿಡಿತದಲ್ಲಿ ಸಿಕ್ಕು, ತಮ್ಮ ಮುದ್ದು ಹೆಣ್ಣುಮಕ್ಕಳ ಶೀಲವನ್ನು ಕೆಡಿಸಿ ಅವರನ್ನೂ ಕೆಟ್ಟ ಮಾರ್ಗಕ್ಕೆ ಎಳೆಯಲು ಸಿದ್ಧರಾದ ತಾಯಂದಿರಿಗೊಂದು ಪಾಠ ಕಲಿಸಬೇಕೆಂದು ಅವಳ ಪ್ರಬಲ ಇಚ್ಛೆಯಾಗಿತ್ತು.

ಈ ಇಚ್ಛೆ ಕೊನೆಗೊಳ್ಳಲು ಯಾವ ಹಾದಿ ನೈಜ ಮತ್ತು ಸರಳವೆಂಬುದನ್ನು ನಿರ್ಣಯಿಸಲು ಅಲ್ಲಿ ಕುಳಿತು ಇವೆತ್‌ಳು ಯೋಚಿಸತೊಗಿದಳು.

ತಾಯಿಯನ್ನು ಒಪ್ಪಿಸಿ, ಇಬ್ಬರೂ ಸೇರಿ ಈ ಗಡಿಬಿಡಿಯ, ವಿಲಾಸ ಪ್ರಮತ್ತ ಜನರಿಂದ ದೂರ ಸರಿದು ಯಾವುದಾದರೊಂದು ದೂರದ ಹಳ್ಳಿಗೆ ಹೋಗಿ ಸಾಮಾನ್ಯರಂತೆ ಜೀವಿಸುವುದು ಮೊದಲನೆಯ ವಿಚಾರ. ಈ ಸಲಹೆಗೆ ತಾಯಿಯು ಒಪ್ಪುವಳೆಂದು ಇವೆತ್‌ಳು ಬಗೆದಳು.

ಒಂದು ವೇಳೆ ಅವಳು ಈ ಸಲಹೆಗೆ ಒಪ್ಪದೆ,ಇಂತಹ ಜೀವನವನ್ನೇ ಅನುಸರಿಸಬೇಕೆಂದು ಒತ್ತಾಯ ಪಡಿಸಿದರೆ ತಾನು ಕೈಕೊಳ್ಳಬೇಕಾದ ಹಾದಿಯಾವುದೆಂಬುವುದು ಎರಡನೆಯ ವಿಚಾರ. ಇದನ್ನು ಬಗೆಹರಿಸಲು ಅನೇಕ ಮಾರ್ಗಗಳಲ್ಲಿ ಮುಖ್ಯವಾದುದೆಂದರೆ ತಾನೊಬ್ಬಳೇ ತಾಯಿಯಿಂದ ದೂರ ಸರಿದು ನಿಲ್ಲುವುದು; ಎಲ್ಲಿಗಾದರೂ ಒಬ್ಬಳೇ ಹೋಗಿ ಬಿಡುವುದು. ಎಲ್ಲಿಗೆ, ಹೇಗೆ ಎಂಬುದೇ ಪ್ರಬಲ ಪ್ರಶ್ನೆಯಾಗಿ ಉಳಿಯಿತು.ಮುಂದೆ ಜೀವಿಸುವ ಬಗೆ ಯಾವುದು? ಯಾರಲ್ಲಿ ಕೆಲಸಕ್ಕೆ ಸೇರುವುದು? ಎಂತಹ ಕೆಲಸ? ಶ್ರೀಮಂತರಲ್ಲಿ ಸೇರಿದರೆ ತನ್ನ ಮಾನಹಾನಿಯಾಗಬಹುದು; ಶೀಲಕ್ಕೆ ಚ್ಯುತಿ ಬರಬಹುದು. ತಾನು ಓದಿದ ಕಾದಂಬರಿ ಪ್ರಪಂಚದಲ್ಲಿಯ ಇಂತಹ ಅನೇಕ ಸನ್ನಿವೇಶಗಳನ್ನು ನೆನೆದು ಯೋಚಿಸಿದಳು. ಮದುವೆಯಾಗದೇ ಉಳಿಯಬೇಕೆಂದರೆ ತನ್ನ ಶೀಲವನ್ನು ತೊರೆದು ಜೀವಿಸಬೇಕಾಗಿತ್ತು. ಇದು ಇವೆತ್‌ಳಿಗೆ ರುಚಿಸುವ ಮಾರ್ಗವಾಗಿರಲಿಲ್ಲ.

ಮದುವೆಯಾಗಿ ಬಾಳು ಸಾಗಿಸುವುದೆಂದರೆ, ತನ್ನ ಜನ್ಮ ರಹಸ್ಯವು ಅಡ್ಡ ಬರುತ್ತಿತ್ತು. ಇಲ್ಲಿಯವರೆಗೆ ತಾನು ಶ್ರೀಮಂತ ಓಬಾರ್ದಿಯ ಮಗಳಾಗಿ ನಡೆಯಿಸಿದ ಜೀವನ ಕ್ರಮವನ್ನರಿತ ಯುವಕನಾವನೂ ತನ್ನನ್ನು ಮದುವೆಯಾಗಲಾರನೆಂದು ಅವಳ ಮನಸ್ಸು ಹೇಳುತ್ತಿತ್ತು. ತನ್ನ ರೂಪು, ಲಾವಣ್ಯ, ಅಂತಸ್ತಿಕೆಯನ್ನು ಅರಿತ ಶ್ರೀಮಂತ ಮನೆತನದವರೆಲ್ಲರೂ ಆಗಲೇ ಅವಳಿಗೆ ಪರಿಚಿತರಾಗಿದ್ದರು. ಆದುದರಿಂದ ಅವರೊಂದಿಗೆ ಮದುವೆಯ ಪ್ರಯತ್ನ ಆಗದ ಮಾತು. ಸಾಮಾನ್ಯನಾದ ಓರ್ವನನ್ನು ಮದುವೆಯಾಗುವುದೆಂದರೆ, ಅಲ್ಲಿಯೂ ತನ್ನ ತಾಯಿಯ ಹೆಸರು ಕೇಳಿದರೆ ತಾನು ಅಂತಹ ಶ್ರೀಮಂತಳ ಮಗಳೆಂದು ಹೆದರಿ ಮದುವೆಯ ಮಾತಿಗೆ ಅವರಾರೂ ಒಪ್ಪುವುದಿಲ್ಲವೆಂದು ಅವಳ ಅನುಭವ ಹೇಳುತ್ತಿತ್ತು.

ಮದುವೆಯ ಮಾತಂತೂ ಈ ಜನ್ಮದಲ್ಲಿ ಇವೆತ್‌ಳಿಗೆ ಅಸಾಧ್ಯವೆಂದು

ಕಂಡು ಬಂತು. ಸನ್ಯಾಸಿಯಾಗಿ ಮಠಗಳನ್ನು ಸೇರುವುದೆಂದರೆ, ತನಗೆ ವಯ ಸ್ಸಾಗಿತ್ತು. ಇಂತಹ ಬೆಳೆದ ಹೆಣ್ಣನ್ನು ಯಾವ ಧರ್ಮ ಮಂದಿರವೂ ಸ್ವಾಗ ತಿಸುತ್ತಿರಲಿಲ್ಲ. ಸಮಾಜದಲ್ಲಿ ಯಾವ ಬಗೆಯ ಸ್ಥಾನವೂ ತನಗೆ ಇಲ್ಲ ವೆಂದು ಇವೆತ್‌ಳಿಗೆ ಮನವರಿಕೆಯಾಯಿತು. ಶೀಲವನ್ನು ತೊರೆದು ಜೀವಿ ಸಬೇಕು. ಇಲ್ಲವೆ ಸಾವನ್ನಪ್ಪಬೇಕು. ಇವೆರಡರಲ್ಲಿ ಯಾವುದಾದರೊಂದು ಮಾರ್ಗವನ್ನು ಅವಳು ಅನುಸರಿಸಬೇಕಾಗಿತ್ತು.

ಯೋಚಿಸಿ ಯೋಚಿಸಿ ಕೊನೆಗೊಮ್ಮೆ ಧೃಢನಿಶ್ಚಯಕ್ಕೆ ಬಂದಳು. ಈ ಲೋಕದಿಂದ ತಾನು ಮರೆಯಾಗುವುದೇ ಒಳಿತೆಂದು ನಿರ್ಣಯಿಸಿದಳು. ಸಾವಿನ ಮಾರ್ಗವೇ ಸರಿಯಾದ ಹಾದಿಯೆಂದು ಅವಳಿಗೆನಿಸಿತು. ಇದರಿಂದ ಯಾರಿಗೂ ಯಾವಬಗೆಯ ಕಷ್ಟ ನಿಷ್ಠುರಗಳು ಬರಲಾರವೆಂದು ನೆನೆದಳು. ತಾನು ಸತ್ತನಂತರ ತಾಯಿಯಾದ ಓಬಾರ್ದಿಯು ಕೆಲ ಸಮಯ ದುಃಖಿಸಿ ಸುಮ್ಮನಾಗುವಳೇ ಹೊರತು, ಮತ್ತಾವ ಹಾನಿಯು ಯಾರಿಗೂ ಉಂಟಾಗ ಲಾರದೆಂದು ಅವಳು ಎಣಿಸಿದಳು. ಸಾವೇ ತನಗೆ ವಿಮೋಚನೆಯ ಹಾದಿ. ಅದರಿಂದಲೇ ಅವಳಿಗೆ ಶಾಂತಿಯೆಂಬ ನಿರ್ಧಾರಕ್ಕೆ ಬಂದಳು.

ಸಾಯುವುದಾದರೂ ಹೇಗೆ? ಕತ್ತಿಯಿಂದ ಇರಿದುಕೊಳ್ಳುವುದೆ? ಇಲ್ಲವೇ ಪಿಸ್ತೂಲಿನಿಂದಲೇ? ಇವುಗಳಿಂದ ತಾನು ಆತ್ಮಹತ್ಯಮಾಡಿ ಕೊಂಡರೆ ಸತ್ತನಂತರ ತನ್ನ ಸುಂದರಮುಖ ವಿಕಾರಗೊಂಡು ಭೀಕರವಾಗಿ ಕಾಣಬಹುದು. ಇಲ್ಲವೆ ತನ್ನ ಪ್ರಯತ್ನ ನಿಷ್ಫಲವಾಗಿ, ಅನಂತರ ಹೆಚ್ಚಿನ ಅಪಹಾಸ್ಯ ಅವಮಾನಗಳಿಗೆ ಒಳಗಾಗ ಬಹುದು. ನದಿಯಲ್ಲಿ ಹಾರಿಕೊಂಡು ಸಾಯುವುದೆಂದರೆ ಉತ್ತಮವಾಗಿ ಈಜುಬಲ್ಲ ತನಗೆ ಅದೂ ಅಸಾಧ್ಯ ವೆಂದು ಕಂಡುಬಂತು. ಜಲಚರಪ್ರಾಣಿಗಳು ತನ್ನ ಶರೀರವನ್ನು ತಿಂದು ವಿಕಾರಗೊಳಿಸುವುದು ಅವಳಿಗೆ ಬೇಡಾಗಿತ್ತು. ಸಾಮಾನ್ಯರಂತೆ ತೂಗು ಹಾಕಿಕೊಂಡು ಸಾಯುವುದು ತೀರ ಸಣ್ಣಕೆಲಸವೆಂದೆನಿಸಿತು. ವಿಷಪಾನ ದಿಂದ ತನಗೆ ಸಾವು ಬಂದೇತೀರುವುದೆಂಬ ನಿಶ್ಚಯವಿರಲಿಲ್ಲ.

ಈ ಎಲ್ಲ ಮಾರ್ಗಗಳಿಗಿಂತಲೂ ಸುಗಮವೂ, ಸರಳವೂ, ನಿರ್ಬಾಧಕವೂ ಆದ ಕ್ಲೋರೋಪಾರಂ ತೆಗೆದುಕೊಂಡು ಸಾಯುವುದೇ ಲೇಸಾದ ಮಾರ್ಗ ವೆಂದು ನಿಶ್ಚಯಿಸಿದಳು. ಈ ಉಪಾಯ ತಾನಾಗಿಯೇ ಹೊಳೆದುದಕ್ಕೆ

ಇವೆತ್‌ಳಿಗೆ ಹೆಚ್ಚಿನ ಸಂತೋಷವಾಯಿತು. ಈ ಬಗೆಯು ಸಾವು ತನ್ನ ಅಂತಸ್ತಿಗೆ ಸರಿ ಹೋಗುವುದೆಂದು ಹೆಮ್ಮೆಪಟ್ಟಳು. ತನ್ನ ಈ ಸಮಸ್ಯೆ ಈ ರೀತಿಯಾಗಿ ಸರಳವಾಗಿ ಬಗೆಹರಿದುದಕ್ಕೆ ಹೆಚ್ಚಿನ ಸಂತೋಷವಾಯಿತು.

ಕೂಡಲೇ ನದಿಯ ನೀರಿನಲ್ಲಿ ತನ್ನ ಕಾಲುಗಳನ್ನು ತೊಯಿಸಿ, ಮುಖವನ್ನು ತಿಳಿಯಾಗಿ ತೊಳೆದುಕೊಂಡು ಆ ಪವಿತ್ರಸ್ಥಳದಲ್ಲಿ ಹಿಂದೆ ಸರ್‌ವೀನ್ನಿಯು ಕೊಟ್ಟ ಮೊದಲ ಮುದ್ದನ್ನು ನೆನಪುಮಾಡಿಕೊಂಡು, ತನ್ನಂಥ ಸುಂದರಿಯು ಜೀವನ ಇಷ್ಟರಿಂದಲೇ ತೃಪ್ತಿಹೊಂದಿ ಈ ಲೋಕದಿಂದ ಮರೆಯಾಗಬೇಕಾಯಿತೆಂದು ಕೊಂಚ ದುಃಖಿಸಿ, ತಾನು ಹಿರಿಯ ಆದರ್ಶವನ್ನು ಸಾಧಿಸುವ ಮಾರ್ಗದರ್ಶಿನಿ ಯಾದೆನೆಂಬ ಹೆಮ್ಮೆಯಿಂದ ಜಿಗಿದೆದ್ದು ನಿಂತು, ಹತ್ತಿರವಿದ್ದ ಹಳ್ಳಿಯಲ್ಲಿಯ ಔಷಧದ ಅಂಗಡಿಗೆ ಹೋದಳು. ಹಲ್ಲಿನ ನೋವೆಂದು ಒಂದು ಔನ್ಸಿನಷ್ಟು ಕ್ಲೋರೋಫಾರಂ ಬೆಲೆಮಾಡಿಕೊಂಡು, ಮುಂದೆ ಕ್ರೋಯಿಸೀ, ಷಾತೋ, ಎಂಬ ಹಳ್ಳಿಗಳಲ್ಲಿ ಒಂದೊಂದು ಔನ್ಸಿನಷ್ಟು ಈ ವಿಷದ್ರಾವಕವನ್ನು ಅಂಗಡಿಗಳಲ್ಲಿ ಹಣಕೊಟ್ಟು ಪಡೆದು, ಮುಂಜಾವಿನ ಉಪಾಹಾರಕ್ಕೆ ಕೊಂಚ ತಡವಾಗಿಯೇ ಮನೆಗೆ ಬಂದು ಸೇರಿದಳು.

ಹೆಚ್ಚು ಹೊತ್ತು ಹೊರಗೆ ಅಡ್ಡಾಡಿ ಬಂದಿದುದರಿಂದ ಅವಳಿಗೆ ಹಸಿವೆಯೂ ಆಗಿದ್ದುದರಿಂದ,ಊಟಚೆನ್ನಾಗಿಮಾಡುತ್ತಿರುವುದನ್ನುಓಬಾರ್ದಿಯು ನೋಡಿ ಸಂತೋಷಗೊಂಡು, ನಗುಮುಖದಿಂದ ಮಗಳನ್ನು ಉದ್ದೇಶಿಸಿ "ನಮ್ಮಸ್ನೇಹಿತರೆಲ್ಲರೂ ಮತ್ತೆ ಆದಿತ್ಯವಾರ ಇಲ್ಲಿಗೆ ಬರಲಿರುವರು.ರಾಜಕುಮಾರರಾದ ಕಾಸ್ರವಲೋವ್, ಕೆವೇಲಿಯರ್ ವಾಲ್‌ರೀಲೇ, ಮತ್ತು ಬೆಲ್‌ವೀಸೀ ಮುಂತಾದವರೂ ಬರಲಿರುವರು. ನಿನಗೆ ಈ ವಿಷಯ ಹರುಷವನ್ನುಂಟು ಮಾಡುವದಿಲ್ಲವೇ ಇವೆತ್ ?" ಎಂದು ಹೇಳಿದಮಾತು ಅವಳಿಗೆ ಸಂತೋಷವನ್ನುಂಟುಮಾಡಲಿಲ್ಲ. ವಿಸ್ಮಯದಿಂದ ಅವಳ ಮುಖ ಬಿಳುಪಾಯಿತು. ಯಾವಮಾತನ್ನೂ ಆಡದೇ ಎದ್ದು ಹೊರಗೆ ಹೋಗಿಬಿಟ್ಟಳು.

ಈರೀತಿ ಮಗಳಾದ ಇವೆತ್‌ಳು ಎಲ್ಲಿಗೆ ಹೋದಳೆಂಬುದನ್ನು ಅರಿಯುವ ಗೋಜಿಗೆ ಓಬಾರ್ದಿಯೂ ಹೋಗಲಿಲ್ಲ. ತನ್ನ ಮಗಳ ಈರೀತಿ ವರ್ತನೆ ಅರಿತವಳಾದುದರಿಂದ ಏನನ್ನೂ ಹೇಳದೆ ಮಗಳು ಹೋಗುತ್ತಿದ್ದ ದಾರಿಯನ್ನು ನೋಡುತ್ತ ಕುಳಿತಳು. ಅಂದು ಶುಕ್ರವಾರ. ಆದಿತ್ಯವಾರ

ಎಷ್ಟು ಬೇಗಬರುವುದೋ, ತನ್ನಮುದ್ದು ಪ್ರಿಯನಾದ ಸಾವಾಲ್‌ನ ತೆಕ್ಕೆಯಲ್ಲಿ ತೂಗಿ ಊಯ್ಯಾಲೆ ಆಡುವ ಸುಖದ ಸನ್ನಿವೇಶ ಬೇಗ ಬರಬಾರದೇಯೆಂಥು ಕನಸನ್ನು ಕಾಣುತ್ತ ಕುಳಿತಿದ್ದಳು.

ಇವೆತ್‌ಳು ರೈಲುಗಾಡಿಯನ್ನೇರಿ ಪ್ಯಾರಿಸ್ ನಗರಕ್ಕೆಹೋಗಿ ತನ್ನ ಸಾವಿಗೆ ಅಗತ್ಯವಾಗಿರುವ ಕ್ಲೋರೋಫಾರಂ ದ್ರಾವಕವನ್ನೂ ಹತ್ತೆಂಟು ಅಂಗಡಿಗಳಲ್ಲಿ ಬೆಲೆಮಾಡಿ ಸಂಜೆ ಸಮಯಕ್ಕೆ ಸರಿಯಾಗಿ ಮನೆಸೇರಿದಳು. ಮಾರನೆಯದಿನ ಬೇಗಎದ್ದು ತನಗೆ ಅನುಕೂಲವಾದ ಸ್ಥಳಗಳಿಗೆ ಹೋಗಿ ಸಾಕಷ್ಟು. ಈ ದ್ರಾವಕವನ್ನು ಜತೆಮಾಡಿಕೊಂಡಳು. ಪಕ್ಕದ ಮತ್ತೊಂದು ಊರಿನ ಔಷಧವ್ಯಾಪಾರಿಯು ಇವಳ ಬೇಡಿಕೆಯನ್ನು ಮನ್ನಿಸಿ ಹೆಚ್ಚು ಪ್ರಮಾಣದಷ್ಟು ಆ ದ್ರಾವಕವನ್ನು ಒದಗಿಸಿದುದರಿಂದ ತನ್ನ ಈ ಪ್ರಯತ್ನ ಸಫಲವಾಗುವ ಲಕ್ಷಣವೆಂದು ಸಂತೋಷ ಹೊಂದಿದಳು. ಮಧ್ಯಾಹ್ನದ ಊಟ ಮುಗಿಸಿ ಮುಂದೆ ಸಂಜೆ ಎಲ್ಲಿಗೂ ಹೋಗಲಿಲ್ಲ. ಬಿಸಿಲಿನ ತಾಪ ಹೆಚ್ಚಾಗಿದ್ದುದರಿಂದ ಹೊರಗೆ ಹೋಗಲು ಮನಸ್ಸೂ ಇರಲಿಲ್ಲ. ಮಾಳಿಗೆಯಮೇಲೆ ನೆರಳಲ್ಲಿ ತನ್ನ ಆರಾಮಕುರ್ಚಿಯಮೇಲೆ ಮಲಗಿ ದಿನವೆಲ್ಲ ಕಳೆದಳು.

ಅಂದು ರಾತ್ರಿಯನ್ನು ಕೂಡ ಯೋಚನೆಯಲ್ಲಿಯೇ ಇವೆತ್‌ಳು ಕಳೆದಳು. ಆದಿತ್ಯವಾರ ಮುಂಜಾನೆ ಅವಳು ತನಗೆ ಬಲು ಪ್ರೀತಿಯ ನೀಲಿವರ್ಣದ ಉಡುಗೆಯನ್ನು ಧರಿಸಿದುದರಿಂದ ಬಲು ಅಂದವಾಗಿ ಕಂಡು ಬಂದಳು. ತನ್ನ ಚೆಲುವನ್ನು ನಿಲುವು ಕನ್ನಡಿಯಲ್ಲಿ ಕಂಡು 'ನಾಳೆ ಈ ಸುಂದರ ಆಕೃತಿ ಈ ಲೋಕದಿಂದ ಮರೆಯಾಗುವದಲ್ಲವೆ?' ಎಂದು ಮನದಲ್ಲಿಯೇ ನೆನೆದಳು. ಸಾವೆಂದ ಕೂಡಲೇ ಭಯಪಡದಇವಳು ಇಂದೇಕೋ ಆ ಮಾತು ನೆನಪಾದ ಕೂಡಲೇ ಕೊಂಚ ವಿಸ್ಮಯವಾದಳಲ್ಲದೆ, ಭಯಪಟ್ಟಂತೆ ಕಂಡು ಬಂತು."ನಾಳೆ ನಾನು ಸತ್ತನಂತರ ಯಾರೊಂದಿಗೂ ಮಾತನಾಡಲಾಗುವುದಿಲ್ಲ. ವಿಷಯ ವಿವೇಚನೆಯನ್ನೂ ಮಾಡಲಾರೆ. ಯಾರನ್ನೂ ನೋಡಲಾಗುವದಿಲ್ಲ" ಎಂದು ಮನದಲ್ಲಿಯೇ ಮತ್ತೆ ನೆನೆಯುತ್ತ ತನ್ನ ಚೆಲುವಾದ ಮುಖವನ್ನು ಮತ್ತೊಮ್ಮೆ ಕನ್ನಡಿಯಲ್ಲಿ ನೋಡಿಕೊಳ್ಳುತ್ತ ತನ್ನೆಲ್ಲ ಅವಯವಗಳ ಅಂದ ಚಂದವನ್ನು ಹಿಗ್ಗಿನಿಂದ ಅವಲೋಕಿಸುತ್ತ ಅಂದು ತನ್ನಲ್ಲಿ ಯಾವುದೋ ಒಂದು ರೀತಿಯ ಹೊಸಕಳೆ, ನೂತನ ಆವೇಶ

ದಿವ್ಯ ತೇಜಸ್ಸು ಆವರಿಸಿ ಕೊಂಡಂತೆ ಅವಳಿಗೆನಿಸಿತು. ಮತ್ತೆ ಮತ್ತೆ ತನ್ನ ಸುಂದರ ಆಕಾರವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತ "ಈ ಕನ್ನಡಿಯಲ್ಲವೆ ಮಾನವರ ಆಕಾರ ರೂಪುಗಳನ್ನು ಇದ್ದದ್ದು ಇದ್ದಂತೆ ತೋರಿಸುವ ಸಾಧನ? ಇಲ್ಲದಿದ್ದರೆ ತಮ್ಮ ರೂಪದ ಅರಿವು ಅವಲೋಕನ ಆಗುವದು ಕಷ್ಟವಲ್ಲವೆ? ಇದೊಂದು ಉತ್ತಮ ಸಾಧನ. ನಾನೆಷ್ಟು ರೂಪವತಿಯಾಗಿ ಕಾಣುತ್ತಿರುವೆನು? ನಾಳೆ ಇದೇ ಸಮಯಕ್ಕೆ ಸರಿಯಾಗಿ ನನ್ನ ಕಳೇಬರವು ಆ ಬೀಹಾಸಿಗೆಯಮೇಲೆ ಬಿದ್ದು ಅನೇಕರಲ್ಲಿ ಅನೇಕ ಬಗೆಯ ಯೋಚನೆಗಳನ್ನುಂಟುಮಾಡುವುದಲ್ಲವೆ? ಇನ್ನೊಂದು ವಾರದಲ್ಲಿ ಈ ಪಾರ್ಥಿವ ಶರೀರ ಮಣ್ಣನ್ನು ಸೇರಿ ಹುಡಿಗೂಡಿ ಹಾಳಾಗುವುದಲ್ಲವೆ? ಮೊದಲು ನೆಲದಮೇಲೆ ಜನ್ನವೆತ್ತಿ ಕಣ್ತೆರೆದು ಮತ್ತೆ ನೆಲವನ್ನೇ ಸೇರುವುದು ನಿಸರ್ಗದ ನಿಯಮವಲ್ಲವೆ?" ಎಂದು ಯೋಚಿಸಿದಳು.

ಸಾವು! ಸಾವೆಂಬ ವಿಷಯ ಮತ್ತೊಮ್ಮೆ ಅವಳ ಹೃದಯದಲ್ಲಿ ಭೀತಿಯಗಾಳಿಯನ್ನು ಬೀಸಿತು. ಅವಳು ವಿಸ್ಮಯದಿಂದ ಶೂನ್ಯ ಆಕಾಶವನ್ನೇ ನೋಡತೊಡಗಿದಳು. ಮತ್ತೊಂದು ಗಳಿಗೆಯಲ್ಲಿ ಸೂರ್ಯಭಗವಾನನು ತನ್ನದಿವ್ಯ ಜ್ಯೋತಿಯನ್ನು ವಿಶಾಲವಾದ ಬಯಲಿನಲ್ಲಿ ಹರಡಲು ಆ ಬೆಳಕು ಇವಳಮೇಲೂ ತೆರೆದಿದ್ದ ಕಿಡಿಕಿಗಳ ಮೂಲಕ ಬೀಳಲು, ಅವಳಲ್ಲಿ ಹೊಸ ಜೀವಕಳೆ ಬಂದಂತಾಯಿತು. ನಸುನಗುವಿನಿಂದ ಆ ಕಿಟಕಿಯ ಬಳಿಯಿದ್ದ ಆಸನದಮೇಲೆ ಕುಳಿತು ಸಾವನ್ನೇ ಕುರಿತು ಯೋಚಿಸತೊಡಗಿದಳು. ತನ್ನ ಸುತ್ತಲಿನ ಜಗತ್ತೇ ಮೆಲ್ಲನೆ ಮಾಯವಾಗುತ್ತಿರುವಂತೆನಿಸಿತು. ತಾನು ಸಾವನ್ನಪ್ಪುವುದರಿಂದ ಜಗತ್ತಿನಿಂದ ದೂರಾಗುವಳು ತಾನೊಬ್ಬಳೇ; ವೃಕ್ಷವುಗಳು ಅಂದರೆ, ತನ್ನ ಕೋಣೆ, ಅದರಲ್ಲಿ ಇರುವ ಇತರ ವಸ್ತುಗಳು, ಎಲ್ಲವೂ ಸ್ಥಿರವಾಗಿಯೇ ಇದ್ದುಬಿಡುವವು. ಆದರೆ ಇಲ್ಲದಂತಾಗುವುದು ತಾನೊಬ್ಬಳೇ ಯೆಂದು ಇವೆತ್‌ಳು ನೆನೆದಳು.

ತಾನು ಸತ್ತನಂತರ ಜನರೇನೆಂದುಕೊಳ್ಳುವರೋ ಯೆಂದು ಇವೆತ್‌ಳು ಹೀಗೆ ಯೋಚಿಸತೊಡಗಿದಳು. "ಎಂತಹ ಚೆಲುವು ಇವೆತ್‌ಳದು! ಜಗತ್ತಿನ ಅತಿಲಾವಣ್ಯವತಿ! ಎಂದು ಆದರದ ನುಡಿಗಳಿಂದ ಕಣ್ಣೀರಿಟ್ಟು ಸುಮ್ಮನಾಗುವರಲ್ಲವೆ? ಈ ನಿನ್ನ ಅಂದವಾದ ಕೈ ಎಷ್ಟು ಮುದ್ದಾಗಿದೆ?

ಇದೂ ಹಾಳಾಗಿ ಮಣ್ಣನ್ನು ಸೇರಬೇಕೊ ? ಅಯ್ಯೋ ನನಗೇಕೆ ಈ ಬಗೆಯಾದ ಭಯವಾಗುತ್ತಿದೆ ? ನನ್ನ ಸಾವಿನೊಂದಿಗೆ ಈ ಜಗತ್ತೇ ಏಕೆ ಹಾಳಾಗಬಾರದು ? ಅದು ಏನೇ ಇರಲಿ, ಜಗತ್ತು ನನಗಂತೂ ಹಾಳಾದಂತೇ ಅಲ್ಲವೆ ?'' ಎಂದು ಚಿಂತಿಸಿ ತನ್ನ ಈ ಹುಚ್ಚು ಯೋಜನೆಗಳಿಗೆ ಮನದಲ್ಲಿಯೇ ನಸುನಕ್ಕು ಸುಮ್ಮನಾದಳು.

ಈ ಹೊತ್ತಿಗೆ ಸರಿಯಾಗಿ ಕೆಳಗಡೆ ಅತಿಥಿಗಳು ಬಂದು ಸೇರಿದರೆಂದು ಅವರ ನಗು, ಮತ್ತು ಎತ್ತರದ ದನಿಯಲ್ಲಿ ಆಡುವ ಮಾತುಗಳಿಂದ ಇವೆತ್‌ಳಿಗೆ ತಿಳಿದು ಬಂತು. ಇಂತಹ ನಗೆಯಾಟ ಇತರ ಸಮಂತಿಗಳಲ್ಲಿ ಸುಖಸಂತೋಷವನ್ನುಂಟುಮಾಡುತ್ತಿದ್ದರೆ, ಇಂದೇಕೋ ಅವಳಿಗೆ ಅಸಹ್ಯವೆನಿಸಿತು ಉತ್ತಮ ಗಾಯಕನಾದ ಬೆಲ್‌ವೀನೇಯು ರಾಗಮಾಡಿ ನುಡಿಸುತ್ತಿದ್ದ ಆ ಸುಮನೋಹರವಾದ ಭಾವಗೀತೆ ಅವಳಿಗೆ ಬೇಡೆನಿಸಿತು.

'' ಕೆಳಗಿಲ್ಲಿ ಸಿಂತಿಪೆನು ನೋಡೆನ್ನ ಮುಗುಧೆ
ತಿಳಿಯಾದ ನಗುವಿಂದೆ ಸಾತ್ವಿಸು ವನಿತೆ ''

ಎಂಬ ಈ ಗೀತೆಯನ್ನು ಅತಿ ಮಂಜುಳ ಸ್ವರದಿಂದ ಎಲ್ಲರೂ ಒಂದಾಗಿ ಹಾಡುವುದು ಕೇಳಿಸುತ್ತಿರಲು, ಬೇಡಾದ ಮನಸ್ಸಿನಿಂದ ಕಿಟಕಿಯ ಬಾಗಿಲನ್ನು ತೆರೆದು ಇವೆತ್‌ಳು ನೋಡಿದಳು. ತನ್ನನ್ನು ವರಿಸಲು ಹಾತೊರೆಯುತ್ತಲಿದ್ದ ಆ ಐವರು ಶ್ರೀಮಂತರೂ ಕಿಲಕಿಲಿ ನಗುತ್ತ, ಅವಳ ಕಡೆ ನೋಡತೊಡಗಿದರು. ಮತ್ತಾರೋ ಹೊಸಬರೂ ಆ ಗುಂಪಿನಲ್ಲಿದ್ದುದನ್ನು ಕಂಡು ಅವಳಿಗೆ ಹೆಚ್ಚು ಬೇಸರವೆನಿಸಿತು. ತನ್ನ ತಾಯಿಯ ಮನೆಯಲ್ಲಿ ನಲಿದು, ಕೆಲಿದು, ಅವಳನ್ನು ನೀಚವೃತ್ತಿಯಲ್ಲಿ ಕೆಡವಿ ಅವಳ ಔದಾರ್ಯದ ಫಲವನ್ನುಂಡು ತೇಗುವ ಈ ತುಂಟರ ತಂಡವನ್ನು ಕಂಡು ಅವಳಿಗೆ ಅಸಹ್ಯಭಾವನೆ ಉಂಟಾಯಿತು. ಇಂತಹ ವ್ಯಗಳ್ಳರ ಮುಖ ನೋಡುವುದು ಸಹಾ ಅವಳಿಗೆ ಬೇಡಾಗಿತ್ತು. ಪೇಟೆಯಲ್ಲಿಯ ಪಾನೀಯಗೃಹಗಳಂತೆ ನೆನೆದು ಸರಳವಾಗಿ ಬಂದು, ಸುಖಲಾಲಸೆಯಲ್ಲಿ ತಣಿದು, ತಮ್ಮ ಮನೆಗೆ ಕಳಂಕವನ್ನು ತರುತ್ತಿರುವ ಈ ಸೋಮಾರಿಗಳಿಗೆ ಬುದ್ಧಿಕಲಿಸುವ ಸಮಯ ಬಂದಿದೆಯೆಂದು ನೆನೆದು '' ಇವರಿಗೆ ಇಂದೇ ತಕ್ಕಶಾಸ್ತಿಯನ್ನು ಮಾಡು

ವೆನು " ಎಂದು ನೆನೆದಳು. ಬೆಳಗಿನ ಉಪಾಹಾರದ ಗಂಟೆ ಬಾರಿಸಲು ಕೆಳಗಿನ ಸದ್ದು ಅಡಗಿತು.

ಇವೆತ್‌ಳು ಉಪಾಹಾರಕ್ಕೆ ಕೆಳಗಿಳಿದು ಹೋದಳು. ಎಲ್ಲರೊಂದಿಗೆ ನಿತ್ಯದಂತೆ ವರ್ತಿಸಿದಳು. ಯಾವ ಬಗೆಯ ಅನುಮಾನವೂ ಬಾರದಂತೆ ನಡೆದು ಕೊಂಡಳು. ಕೊಂಚ ಗಂಭೀರದ ಮುಖಮುದ್ರೆಯಿಂದ ಎಲ್ಲರೊಂದಿಗೆ ಕೈ ಕುಲುಕಿದಳು. ಸರ್‌ವೀನ್ನೀಯ ಸರತಿಬಂದಾಗ ಆವನು ಸುಮ್ಮನಿರದೆ "ಇಂದು ಶ್ರೀಮತಿಯವರ ಕೋಪ ಕೊಂಚ ಇಳಿದಂತೆ ಕಾಣುತ್ತದೆ." ಎಂದು ಕೆಣಕುವ ಸ್ವರದಲ್ಲಿ ಕೇಳಿದ. ಆದರೆ ಒಂದು ಬಗೆಯ ಕಠೋರ ಮತ್ತು ಬಿರುಸು ರೀತಿಯಲ್ಲಿಯೇ ಇವೆತ್‌ಳು " ಇಂದು ನಾನು ಪ್ಯಾರಿಸ್‌ದ ಕನ್ನಿಕೆಯಂತೆ ಹರ್ಷಭರಿತಳಾಗಿರುವೆನು. ದಿನವೂ ಮಾಡದಂತಹ ತಪ್ಪುಗಳನ್ನು ಇಂದು ನಾನು ಮಾಡಲು ಅಂಜುವುದಿಲ್ಲ. ನನ್ನೊಂದಿಗೆ ಎಲ್ಲರೂ ಹರುಷ, ಸಂಭ್ರಮದಿಂದ ವರ್ತಿಸಬೇಕು ತಿಳಿಯಿತೇ? " ಎಂದು ಹೇಳಿದಳು

ಹತ್ತಿರವೇ ನಿಂತಿದ್ದ ಬೆಲ್‌ವೀನೀಯವರ ಕಡೆ ತಿರುಗಿ '' ನೀವು ಇಂದು ನನ್ನೊಂದಿಗೇ ಇದ್ದು, ಯಾರಾದರೂ ನನ್ನನ್ನು ಹೆಚ್ಚು ಅವಮಾನಗೊಳಿಸುವ ಸಮಯಬಂದರೆ ಆ ವಿಪತ್ತಿನಿಂದ ಪಾರುಮಾಡಬೇಕು ತಿಳಿಯಿತೇ ? ಉಪಾಹಾರವಾದನಂತರ ಮಾರ್ಲೀದಲ್ಲಿ (Marly) ನಡೆಯುವ ವಿನೋದ ಪ್ರದರ್ಶನದ ಬಯಲಿಗೆ ಹೋಗುವ. ಎಲ್ಲರೂ ಬರುವಿರಲ್ಲವೆ ? ಬೆಲ್‌ವೀನೀಯವರೇ ನೀವೇ ನನ್ನ ಕಾವಲುಗಾರರು, ಅರ್ಥವಾಯಿತೆ? " ಎಂದು ಎತ್ತರದ ಸ್ವರದಲ್ಲಿ ತನ್ನ ಅಂದಿನ ಕಾರ್ಯಕ್ರಮದ ವಿವರವನ್ನು ಸಾರಿ ಹೇಳಿದಳು.

ಮಾರ್ಲೀಯಲ್ಲಿ ಅಂದು ಒಂದು ತಮಾಷೆ ನಡೆಯುವುದಿತ್ತು. ಎಲ್ಲರೂ ನಕ್ಕು ಸುಮ್ಮನಾದರು. ಅಂದು ನೂತನ ಅತಿಥಿಗಳಾಗಿ ಬಂದ ಕೌಂಟ್ ತಾವೀ, ಮತ್ತು ಮಾರ್ಕ್ವಿಸ್ ಬ್ರಿಕೇತೋ ಇವರುಗಳ ಪರಿಚಯ ಇವೆತ್‌ಳಿಗೆ ಮಾಡಿಕೊಟ್ಟರು.

ಮುಂಜಾನೆಯ ಉಪಾಹಾರದ ಸಮಯದಲ್ಲಿ ಇವೆತ್‌ಳು ಮತ್ತೇನೂ ಮಾತನಾಡಲಿಲ್ಲ. ಮೌನದಲ್ಲೇ ಉಳಿದು ತನ್ನೆಲ್ಲ ಉತ್ಸಾಹವನ್ನು ಅಂದು ಮಧ್ಯಾಹ್ನದ ವಿನೋದದ ಪ್ರದರ್ಶನದಲ್ಲಿ ಪ್ರದರ್ಶಿಸಬೇಕೆಂದು ಅವಳು

ನೆನೆದಿದ್ದಳು.ತಾನಂದು ರಾತ್ರಿ ಕೈಕೊಳ್ಳುವ ಭೀಕರ ಮತ್ತು ಅಮಾನುಷ ಕಾರ್ಯದ ಸುಳಿವು ಯಾರಿಗೂ ತಿಳಿಯಗೊಡಬಾರದೆಂದು ನೆನೆದಳು. ಎಲ್ಲರಿಗಿಂತಲೂ ಹೆಚ್ಚಿನ ಉತ್ಸಾಹ, ಸಂತೋಷದಲ್ಲಿ ಕಾಲಕಳೆಯಬೇಕೆಂದು ಅವಳ ಉದ್ದೇಶವಾಗಿತ್ತು.ಮರುದಿನದ ಮುಂಜಾನೆ ನಡೆಯಲಿರುವ ಘೋರ ಕೃತ್ಯದ ಕುರುಹು ಯಾರಿಗೂ ತಿಳಿಯಗೊಡಬಾರದೆಂದು ನಿರ್ಣಯಿಸಿ "ಅಯ್ಯೋ ಪಾಪ ! ಎಷ್ಟು ಹಿಗ್ಗಿನಲ್ಲಿದ್ದಳು ಇವೆತ್ ? ಇಂತಹ ಕಾರ್ಯ ವನ್ನೇಕೆ ಮಾಡಿದಳು. ಇದೇನು ಆಶ್ಚರ್ಯ? " ಎಂದು ಎಲ್ಲರೂ ತನ್ನ ಬಗ್ಗೆ ಮಾತನಾಡಬೇಕೆಂದು ಇವೆತ್‌ಳ ಬಯಕೆ ಇತ್ತು.

ಮುಂದೇನು ಆಗುವುದೋಯೆಂಬುದನ್ನು ತಿಳಿಯಲು ಅವಳ ಹೃದಯ ಕಾತರಗೊಂಡಿರಲಿಲ್ಲ. ಸಂಜೆ ಹೇಗೆ ಕಳೆಯುವೆನೋ ಯೆಂಬ ವಿಷಯದ ಅರಿವೂ ಅವಳಿಗಿರಲಿಲ್ಲ.ಹೆಚ್ಚು ಉಲ್ಲಾಸದಲ್ಲಿ ಮಗ್ನಳಾಗಿ ಉದ್ರೇಕದಲ್ಲಿಯೇ ಸಮಯವನ್ನು ಕಳೆದು ಮುಂದೆ ಬರುವ ದುಃಖದ ಅರಿವು ಇಲ್ಲದಂತೆ ಕೆಲವು ಗಂಟೆಗಳ ವರೆಗಾದರೂ ಆನಂದದಿಂದಿರುವುದೆಂದು ನಿರ್ಣಯಿಸಿದಳು. ಎಂದೂ ಸೇವಿಸಿದಷ್ಟು ಮಾದಕ ಪಾನೀಯವನ್ನು ಮಿತಿಮೀರಿ ಸೇವಿಸಿದಳು ಮೇಲೆ ಬ್ರಾಂಡಿಯೂ ಆಯಿತು. ಟೇಬಲ್‌ನಿಂದ ಏಳುವಾಗ ಅವಳ ಕಣ್ಣು ಗಳು ಕೆಂಪಡರಿ, ಕೆಂಡದಂತೆ ತೂಕತಪ್ಪಿ ಬೀಳುವ ಉದ್ರೇಕಾವಸ್ಥೆ ಯಲ್ಲಿದ್ದಳು. ಇವಳಿಷ್ಟು ಆನಂದ ಉದ್ರೇಕಗಳಲ್ಲಿ ಏಕೆ ಇರುವಳೆಂದು ಅಲ್ಲಿ ಸೇರಿದ ಅವಳ ಮಿತ್ರರು ಅವರವರಿಗೆ ಅನುಗುಣವಾಗುವಂತೆ ಅದರ ಅರ್ಥ ವನ್ನು ಕಲ್ಪಿಸಿಗೊಂಡು ಮನದಲ್ಲಿಯೇ ಹಿಗ್ಗಿದರು. ಏನನ್ನೂ ಮಾಡಲು ಎಂತಹ ದಣುವಾದ ಕೆಲಸದಲ್ಲಿ ಯಾದರೂ ತೊಡಗಲು ಇಡೀ ರಾತ್ರಿ ನರ್ತನದಲ್ಲಿ ಮಗ್ನಳಾಗುವ ಶಕ್ತಿ ಸಾಮರ್ಥ್ಯಗಳನ್ನು ಇವೆತ್‌ಳು ಪಡೆದವ ಳಂತಿದ್ದಳು. ಒಬ್ಬಳೇ ಎಲ್ಲಿಗೆ ಬೇಕಾದರೂ ಹೋಗುವಷ್ಟು ಧೈರ್ಯ ಅವಳಿಗೆ ಬಂದಿತ್ತು.

"ನಡೆಯಿರಿ. ಮಾರ್ಲೆಯಲ್ಲಿ ನಡೆಯುವ ಸಂತೋಷ ಕೂಟಕ್ಕೆ; ಆನಂದೋತ್ಸವಕ್ಕೆ" ಎಂದು ಎದ್ದು ನಿಂತು ಬೆಲ್‌ವೀನೀಯ ಕೈ ಹಿಡಿದು ಎಲ್ಲರಿಗಿಂತಲೂ ಮುಂದೆ ಹೆಜ್ಜೆ ಹಾಕಿದಳು. "ನಾವಿಬ್ಬರೂ ಜತೆಯಾಗಿ ಮುಂದೆ ನಿಲ್ಲುವೆವು.ನೀವು ಮಿಕ್ಕವರು ಸಾಲಾಗಿ ಹಿಂದೆ ಬನ್ನಿ; ಸರ್‌ವೀನ್ನೀ

ಮಹಾಶಯರು ನಮ್ಮ ಮುಂದಾಳಾಗಿ ಸಾಗಬೇಕು. ಅವರೇ ನಮ್ಮದಳಪತಿ. ಮುಂದೆಬನ್ನಿಮಸ್ಕೇಡರೇ, ನಮ್ಮ ಹಿಂದೆ ರಾಜಕುಮಾರರು, ಅನಂತರ ವಾಲ್‌ರೀಲೇಯವರು, ಅನಂತರ ಇಂದು ನಮ್ಮ ಸೇನೆಗೆ ಬಂದು ಸೇರಿದ ಹೊಸಬರಿಬ್ಬರು. ಹೂ. ಸಾರ್ಜೆಂಟ ಸರ್‌ವಿನ್ನೀಯವರೆ, ಸಾಗಿರಿ ಮುಂದೆ. ಅಪ್ಪಣೆಕೊಡಿರಿ ” ಎಂದಳು.

ಅವಳ ಆಜ್ಞೆಯನ್ನು ಮೀರಿ ನಡೆಯುವ ಇಚ್ಛೆಯಾರಿಗೂ ಇರಲಿಲ್ಲ. ಇವರೆಲ್ಲಾರೂ ಸಾಲಾಗಿ ಬೋಗೀವಾಲ್‌ದ ಹಳ್ಳಿಯಲ್ಲಿ ಹೋಗುವ ದೃಶ್ಯವನ್ನು ನೋಡಿ ದಾರಿಗರಲ್ಲಿ ಅನೇಕರು ತಮ್ಮ ತಮ್ಮೊಳಗೆ ನಕ್ಕು ಕುಚೇಷ್ಟೆ ಮಾಡಿದರು. ಅಂತೂ ಯಾರ ಪರಿವೆಯೂ ಇಲ್ಲದೆ ಈ ಮೆರವಣಿಗೆ ಮಾರ್ಲೇ ಉತ್ಸವದತ್ತ ಸಾಗಿತು. ದಾರಿಯಲ್ಲಿ ರೈಲ್ವೇ ನಿಲ್ದಾಣದತ್ತ ಕೆಲವರು “ಇವರು ಕುಡಿದು ಎಚ್ಚರತಪ್ಪಿ ಪ್ರಮತ್ತಾವಸ್ಥೆಯಲ್ಲಿರುವರು, ಕೊಂಚ ಸೀತಲ ಜಲದಿಂದ ಅವರ ಈ ಉದ್ರೇಕಾವಸ್ಥೆಯನ್ನು ಇಳಿಸುವ” ಎಂದು ಜನರು ಕೋಲಾಹಲ ನಡೆಸಿದರು.

ಬೆಲ್‌ವೀನೀಯನ್ನು ಸೆರೆಯಾಳಿನಂತೆ ಇವೆತ್‌ಳು ಚೇಷ್ಟೆಮಾಡುತ್ತಾ ಕರೆದೊಯ್ಯುತ್ತಿದ್ದಳು. ಅವಳ ಮುಖದಮೇಲೆ ಒಂದು ಬಗೆಯಾದ ಯೋಚನೆಯ ಛಾಯೆ ಕಂಡು ಬಂದರೂ ಕೆಲವೊಂದು ಸಮಯ ಗಂಭೀರ ಮುದ್ರೆಯನ್ನು ತಾಳುತ್ತಿದ್ದಳು. ಸರ್‌ವಿನ್ನೀಯು ಇವೆತ್‌ಳ ಆಜ್ಞೆಯನ್ನು ಪಾಲಿಸುತ್ತ ಮುಂದರಿಯುತ್ತಲಿದ್ದನು. ಹಿಂದಿನವರೆಲ್ಲರೂ ಹರುಷಚಿತ್ತದಿಂದ ಮಾರ್ಲೇ ಪ್ರದೇಶವನ್ನು ತಲುಪಿದರು.

ಆ ವಿನೋದದ ವಿಹಾರ ಪ್ರದೇರದಕ್ಕೆ ಈ ಜನರ ಗುಂಪು ಬರುವುದರಿಂದ ಆ ಕೂಟಕ್ಕೆ ವಿಶೇಷ ಕಳೆಬಂದಿತು. ಅಲ್ಲಿ ನೆರೆದಿದ್ದ ಜನರ ಕೋಲಾಹಲ ಹೆಚ್ಚಿತು. ಹೆಂಗಳೆಯರು ಚಪ್ಪಾಳೆ ತಟ್ಟುತ್ತ ಇವರಿಗೆ ಸುಸ್ವಾಗತವನ್ನು ಬಯಸಿದರು. ಓರ್ವ ದೀರ್ಘಕಾಯನು ತನ್ನ ಕಿರಿದಾಕಾರದ ಹೆಂಡತಿಯನ್ನು ಒಂದು ಕೈಯಿಂದ ಎತ್ತಿ ಹಿಡಿಯುತ್ತ ಕುಣಿಯುತ್ತ ಈ ಜನರ ಸಂತೋಷ ಸಂಭ್ರಮದಲ್ಲಿ ಬೆರೆತು ಹರುಷ ಹೊಂದಿದನು.

ಆ ಸಂತೋಷದ ಸಮ್ಮೇಳನದಲ್ಲಿ ಕಟ್ಟಿಗೆಯ ಜೋಡುಕುದುರೆಗಳ ರಂಕಲ್‌ರಾಟೆಯೂ ಇತ್ತು. (Merry-go-round.) ಇವೆತ್‌ಳು ಬೆಲ್‌

ವೀನೀಯನ್ನು ರಾಟಿಯ ಕೊರಡಿನ ಕುದುರೆಯ ಮೇಲೇರುವಂತೆ ಬಲಾತ್ಕಾರ ಮಾಡಿದಳು. ತಾನು ಪಕ್ಕದಲ್ಲಿದ್ದ ಕುದುರೆಯ ಮೇಲೇರಿ ಕುಳ್ಳಿರಲು ರಂಕಲ್ ರಾಟಿಯು ವೇಗದಿಂದ ತಿರುಗುತ್ತಿರುವಾಗ ತಮ್ಮ ಹಿಂದೆ ಇತರ ಜನರನ್ನು ಓಡುವಂತೆ ಬಲಾತ್ಕರಿಸಿದಳು. ಆ ಆಟವು ಕೊನೆಗಂಡನಂತರ ಬೆಲ್ ವೀನೀಯು ಕುದುರೆಯಿಂದ ಕೆಳಗಿಳಿಯಲು ತಲೆತಿರುಗಿ ಬೀಳುವಂತಾಗಿ ನೆಲಕ್ಕುರುಳಿದಾಗ ಎಲ್ಲರೂ ನಕ್ಕು ನಲಿದರು.

ಆ ಪ್ರದರ್ಶನದಲ್ಲಿ ಏರ್ಪಡಿಸಿದ ಅನೇಕ ಬಗೆಯ ಅಂಗಡಿಗಳಿಗೆ ಇವೆತ್ ಳು ಹೋಗಿ, ವಿವಿಧ ರೀತಿಯ ಆಟದ ಸಾಮಾನುಗಳನ್ನು ತನ್ನ ಗೆಳೆಯರು ಕೊಳ್ಳುವಂತೆ ಬಲಾತ್ಕರಿಸಿದಳು. ಶ್ರೀಮಂತಿಕೆಯಲ್ಲಿ ಮೆರೆದು ತಮ್ಮ ಅಂತಿಸ್ತಿಗೆ ಕೀಳಾದ ಈ ಬಗೆಯ ಕೆಲಸವನ್ನು ಮಾಡಿಸುತ್ತಿರುವಳೆಂದು ರಾಜಕುಮಾರನೂ ವಾಲ್ ರೀಲೀಯೂ ಕೊಂಚ ಸಿಟ್ಟಾದರು. ಆದರೆ ಇವೆತ್ ಳೆದುರು ಅವರ ಸಿಟ್ಟು ನಡೆಯಲಿಲ್ಲ. ಅವಳ ಈ ವಿಚಿತ್ರ ವರ್ತನೆ ಅಂದೆಲ್ಲರನ್ನೂ ಬೆರಗುಗೊಳಿಸಿತು.

ಆಟಪಾಟಗಳು ನಡೆದಿದ್ದ ಪ್ರದೇಶವನ್ನು ಸುತ್ತಿ ಅಂಗಡಿಗಳನ್ನೆಲ್ಲ ನೋಡಿಕೊಂಡು, ಪ್ರದರ್ಶನದ ಒಂದು ಕೊನೆಗೆ ಬಂದು ಸೇರಿದರು. ಅಲ್ಲಿಯ ವರೆಗೂ ತನ್ನ ಆಜ್ಞಾನುಸಾರಿಗಳಾಗಿ ವರ್ತಿಸಿದ ತನ್ನ 'ಬಳಗದವರನ್ನು ಕೃಪಾಕಟಾಕ್ಷದಿಂದ ರಾಜಾಧಿರಾಜನು ನೋಡುವಂತೆ ಅವರನ್ನೊಂದು ಸಲ ಗಂಭೀರವಾಗಿ ನೋಡಿ, ನದಿಯ ದಡವನ್ನು ಸಮೀಪಿಸಿದಳು. ನದಿಯ ತಿಳಿ ನೀರನ್ನು ಕಂಡಕೂಡಲೇ ತನ್ನ ಮಿತ್ರರನ್ನು ಕುಚೇಷ್ಟೆ ಮಾಡಬೇಕೆಂಬ ಇಚ್ಛೆಯುಂಟಾಗಿ, ಅವರೆಲ್ಲರನ್ನುದ್ದೇಶಿಸಿ "ನನ್ನನ್ನು ಯಾರು ಹೆಚ್ಚಾಗಿ ಪ್ರೀತಿಸುವರೋ ಅವರೀಗಿಂದೀಗಲೇ ನದಿಯಲ್ಲಿ ಹಾರಿಕೊಳ್ಳಬೇಕು. ಯಾರು ಸಿದ್ಧರಾಗುವಿರಿ?" ಎಂದು ಕೇಳಿದಳು.

ನದಿಯಲ್ಲಿ ಹಾರಿಕೊಳ್ಳಲು ಮುಂದೆ ಯಾರೂ ಬರಲಿಲ್ಲ. ಈ ಹೊತ್ತಿಗೆ ಇತರರೂ ಅಲ್ಲಿ ಗುಂಪಾಗಿ ನೆರೆದಿದ್ದರು. ಹೆಂಗಳೆಯರು ಮುಂದೇನು ನಡೆಯುವುದೆಂಬುವುದನ್ನು ನೋಡಲು ಅತಿ ಉತ್ಸುಕತೆಯಿಂದ ನೋಡುತ್ತ ನಿಂತಿದ್ದರು. ಸೈನಿಕರಿಬ್ಬರು ಇವೆತ್ ಳ ಈ ಸವಾಲವನ್ನು ಕೇಳಿ ಎಲ್ಲರಿಗೂ ಕೇಳಿಸುವಂತೆ ನಕ್ಕುಬಿಟ್ಟರು.

ಇವರ ನಗು ಇವೆತ್‌ಳ ಅಂತಸ್ತಿಗೆ ಪೆಟ್ಟು ಬಡಿದಂತೆನಿಸಿತು. "ನನ್ನ ಇಚ್ಛೆ ಈಡೇರಿಸಲು ನದಿಯಲ್ಲಿ ಹಾರಿಕೊಂಡು ಈಜುವುದಕ್ಕೆ ಯಾರೂ ಸಿದ್ಧರಿಲ್ಲವೆ? ಇದೇನು ಸೋಜಿಗ? ನನ್ನನ್ನು ನಿಜವಾಗಿ ಯಾರೂ ಪ್ರೀತಿಸುವುದಿಲ್ಲವೆ? ಇದು ನಗೆಗೇಡು" ಎಂದು ಬೇಸರ ಪಟ್ಟುಕೊಂಡಳು.

ಸರ್‌ವೀನ್ನೀಗೆ ಬಲು ನೋವಾಯಿತು. ಕೂಡಲೇ "ನಾನಿರುವೆನು, ನಿನ್ನ ಪ್ರೀತಿಗಾಗಿ ನಾನು ಏನು ಮಾಡಲೂ ಸಿದ್ಧನೇ" ಎಂದು ನುಡಿದು ನಿಂತಪಟ್ಟನಲ್ಲೇ ನದಿಯಲ್ಲಿ ಹಾರಿದನು. ಹೀಗೆ ಉತ್ಸಾಹದಿಂದ ಹಾರುವುದರಿಂದ ನದಿಯ ನೀರು ಅಲ್ಲಿಯೇ ಹತ್ತಿರವೇ ನಿಂತಿದ್ದ ಇವೆತ್‌ಳ ಪಾದಗಳಿಗೆ ಸಿಡಿದವು. ಹೀಗೆ ಸರ್‌ವಿನ್ನೀಯು ಹಿಂದು ಮುಂದಾಲೋಚಿಸದೇ, ಉಟ್ಟ ಅರಿವೆಗಳಿಂದಲೇ ನದಿಯಲ್ಲಿ ಹಾರಿಕೊಂಡುದುದಕ್ಕೆ ಎಲ್ಲರೂ ಆಶ್ಚರ್ಯ ಚಕಿತರಾದರು. ಕೆಲವರಿಗೆ ಇದು ಬಲು ಮೋಜಿನ ಪ್ರಸಂಗವೆಂದೆನಿಸಿತು.

ಇವೆತ್‌ಳಿಗೆ ಸಂತೋಷವಾಯಿತು. ಅಲ್ಲಿದ್ದ ಒಂದು ಕಟ್ಟಿಗೆಯ ಕೊರಡನ್ನು ಹರಿಯುವ ನೀರಿನಲ್ಲಿ ಎಸೆದಳು. "ಅದನ್ನು ಹಿಡಿದು ತರುವಿರಾ?" ಎಂಬ ಸವಾಲಿಗೆ ಮಾರುತ್ತರವಾಗಿ, ಆ ಯುವಕನು ತನ್ನ ಶಕ್ತಿ ಮೀರಿ ಈಜತೊಡಗಿ ಅದನ್ನು ಪಡೆದು, ಈಜುತ್ತ ದಡವನ್ನು ಸೇರಿ, ಇವೆತ್‌ಳಿಗೆ ಅದನ್ನು ತನ್ನ ಪ್ರೇಮದ ಕಾಣಿಕೆಯಾಗಿತ್ತನು.

ನೆರೆದ ಜನರೆದುರು ಸಾಮರ್ಥ್ಯವನ್ನು ತೋರಿದ ಈ ಸುಂದರ ಯುವಕನಾದ ಸರ್‌ವೀನ್ನೀಯು ಇವೆತ್‌ಳ ಮುಂದೆ ಉಸಿರೆಳೆಯುತ್ತ ಕುಳಿತಿರಲು ಅವನ ಮುದ್ದಾದ ಮುಂಗುರುಳನ್ನು ತನ್ನ ಮೃದು ಕೈಗಳಿಂದ ಪ್ರೀತಿಯಿಂದ ಸವರುತ್ತ "ನೀವು ಬಲು ಸುಂದರರು, ಶಕ್ತಿವಂತರು." ಎಂದು ಅವನ ತಲೆಯನ್ನು ಮುದ್ದಿಟ್ಟಳು.

ಅಲ್ಲಿಯೇ ದೂರದಲ್ಲಿ ನಿಂತಿದ್ದ ಕೊಬ್ಬಿದ ದೇಹವುಳ್ಳ ಓರ್ವ ಹೆಣ್ಣುಮಗಳು "ಇದೇನು ನಾಚಿಕೆಗೇಡು? ಬಹಿರಂಗವಾಗಿ ಅವಳು ಇವನ ಕೂದಲುಗಳನ್ನು ಮುದ್ದಿಡಬಹುದೇ?" ಎಂದು ಹೇಳಿ ಮೂಗು ಮುರಿದಳು. ಅವಳ ಹತ್ತಿರವೇ ನಿಂತಿದ್ದ ಇನ್ನೊಬ್ಬಳು "ಈ ರೀತಿಯಾಗಿ ಕುಚೇಷ್ಟೆ ಮಾಡಿ ಗಂಡುಸರನ್ನು ಹೀಯಾಳಿಸುವುದು ಕುಲೀನ ಹೆಣ್ಣಿಗೆ ತರವಲ್ಲ"

ಎಂದು ಸಿರಿದಳು.

ಹತ್ತಿರವೇ ನಿಂತಿದ್ದ ಬೇರೋರ್ವನು "ಇವಳೆಷ್ಟು ಚೆಲುವಿಯಾದರೂ ಅವಳ ಪ್ರೀತಿ ಸಂಪಾದಿಸಲು ನಾನು ನದಿಯಲ್ಲಿ ಹಾರಿಕೊಳ್ಳುವಷ್ಟು ಮೂರ್ಖನಲ್ಲ" ಎಂದು ದನಿಗೂಡಿಸಿದನು.

ಪಕ್ಕದಲ್ಲೇ ಬೆಪ್ಪಾಗಿ ನೋಡುತ್ತ ನಿಂತಿದ್ದ ಬೆಲ್‌ವೀನಿಯ ಕೈಯನ್ನು ಇವೆತ್‌ಳು ಹಿಡಿದು "ನಿನಗೊಂದು ಸುಸಮಯ ದೊರೆತಿತ್ತು. ನನ್ನ ಪ್ರೀತಿ ಸಂಪಾದಿಸುವ ಉತ್ತಮ ಪ್ರಸಂಗ ಒದಗಿದಾಗ ಅದರ ಲಾಭವನ್ನು ಪಡೆಯಲಿಲ್ಲ. ನೀನೊಬ್ಬ ಮೂರ್ಖ." ಎಂದು ಚೇಷ್ಟೆ ಮಾಡಿ ಮುಂದೆ ಸಾಗಿದಳು. ಇದೆಲ್ಲವನ್ನೂ ಅತಿ ಆಶ್ಚರ್ಯದಿಂದ ನೋಡುತ್ತ ನಿಂತಿದ್ದ ಜನರನ್ನು ನೋಡಿ "ಏನಿವರ ಅನಾಗರಿಕ ಲಕ್ಷಣ? ಬೆಲ್‌ವೀನಿಯವರೇ, ನೀವೂ ಇವರಂತೆ ಕೇವಲ ಮೂರ್ಖರೇ" ಎಂದು ನಗೆಯಾಡಿದಳು.

ಬೆಲ್‌ವೀನೀಯು ಅವಳ ವಿನೋದದ ಮಾತಿಗೆ ಸಮ್ಮತಿಯನ್ನು ಸೂಚಿಸುವವಂತೆ ತಲೆಬಾಗಿಸಿ ನಕ್ಕು ಸುಮ್ಮನಾದ. ಕ್ರಾವಲೋವ ರಾಜ ಕುಮಾರನೂ, ಮತ್ತು ವಾಲ್‌ರೀಲೇಯವರು ಅಲ್ಲಿಂದ ಮಾಯವಾದುದನ್ನು ಇವೆತ್‌ಳು ಕಂಡು ಹಿಡಿದಳು. ತನ್ನ ಪರಿವಾರದವರು ತೀರ ಬೇಸತ್ತಿರುವರೆಂದು ತಿಳಿದು ಇನ್ನೂ ಒದ್ದೆ ಅರಿವೆಗಳಿಂದಲೇ ಸಂಕಟಪಡುತ್ತಿರುವ ಸರ್‌ವೀನ್ಸೀಯನ್ನು ಕಂಡು ಮರುಗಿ "ಪಾಪ ಮಿಸ್ಟೇಡರೇ ನಿಮ್ಮನ್ನು ನೋಡಿ ನನಗೆ ಅಯ್ಯೋಯೆನಿಸುತ್ತದೆ. ಇಲ್ಲಿ ಜೂಜಾಟದಲ್ಲಿ ಹೆಚ್ಚು ಹಣ ಗಳಿಸಲು ತಾವು ಬಲು ಆತುರರಾಗಿದ್ದಂತೆ ನನಗೆನಿಸಿತು. ಆದರೆ ನನ್ನಿಂದ ನಿಮಗೆ ಈ ಸಂಕಟ ಒದಗಿತಲ್ಲವೇ?'' ಎಂದು ನುಡಿಯುತ್ತ ಮರುಕ್ಷಣದಲ್ಲಿಯೇ ಅಕಾರಣವಾಗಿ ಆವೇಶದಿಂದ ಅವಳು ಅಳತೊಡಗಿದುದು ಬೆಲ್‌ವೀನೀಗೆ ಅರ್ಥವಾಗಲಿಲ್ಲ. ಅವನು ತೀರ ಬೆರಗಾಗಿ "ಹೀಗೇಕೆ ಇವೆತ್? ಏನಾಯಿತು? ಅಳುವುದಕ್ಕೆ ಕಾರಣವೇನು?" ಎಂದು ಕೇಳಿಕೊಂಡ.

"ಮಹಾಶಯರೇ, ನನ್ನನ್ನು ಹೆಚ್ಚು ಕಾಡಬೇಡಿರಿ." ಎಂದಳು ಇವೆತ್.

"ನಿಮ್ಮನ್ನು ಯಾರು ಅವಮಾನಗೊಳಿಸಿದರು....?" ಎಂದು ಅವನು ಮತ್ತೆ ಕೇಳಿದಾಗ ಅವಳು ಕೊಂಚ ಸಿಡುಕಿನಿಂದ "ನಿಮಗೆ ಸುಮ್ಮನಿರಲು ಸಾಧ್ಯವಿಲ್ಲವೆ?'' ಎಂದು ಗದರಿಸಿಕೊಂಡಳು.

ಈ ಬಗೆಯಾದ ಅಳುವಿಗೆ ಕಾರಣವೇನಿತ್ತೆಂಬುದು ಯಾರಿಗೂ ತಿಳಿಯಲಿಲ್ಲ. ಇಲ್ಲಿಯ ವರೆಗೆ ನಗುವಿನ ಕಡಲಲ್ಲಿ ಬಲು ಆನಂದದಿಂದ ತೇಲಿ ಹೋಗುತ್ತಿದ್ದ ಇವೆತ್‌ಳು ಏಕಾಏಕಿಯಾಗಿ ಸಮುದ್ರದಲ್ಲಿ ತೆರೆತೆರೆಯಾಗಿ ಅಲೆಗಳೆದ್ದು ಬರುವಂತೆ ಬಿಕ್ಕಿ ಬಿಕ್ಕಿ ಅಳುವುದು ಎಲ್ಲರಿಗೂ ಆಶ್ಚರ್ಯವೆನಿಸಿತು. ಅವಳ ಅಳುವಿನ ಆಳವು ತೀರ ವಿಕೋಪಕ್ಕಿಟ್ಟು ಕೊಂಡು ಅದರ ಆವೇಶದಲ್ಲಿ ಮುಂದೆ ಅವಳಿಗೆ ಹೆಜ್ಜೆಯಿಡುವದೇ ಅಸಾಧ್ಯವೆನಿಸಿತು.

ಬದಿಯಲ್ಲಿಯೇ ನಿಂತಿದ್ದ ಬೆಲ್‌ವೀನೀಯು ಇದೆಲ್ಲವನ್ನೂ ಮಂಕು ಬಡಿದವನಂತೆ ನೋಡುತ್ತ, ಏನೂ ತೋಚದೇ, ಹೆಚ್ಚಿನ ಉದ್ವೇಗದಿಂದ "ಇದೇನು ಇವೆತ್? ನನಗೇನೂ ಅರ್ಥವಾಗುತ್ತಿಲ್ಲ" ಎಂದು ಅವಳನ್ನು ಮತ್ತೆ ಕೇಳತೊಡಗಿದ.

ಈ ಹೊತ್ತಿಗೆ ಸರ್‌ವೀನ್ನೀಯು ಸಪ್ಪೆ ಮುಖದಿಂದ ಮುಂದೆ ಬಂದು " ಮನೆಗೆ ಹೋಗುವ. ನಿನಗೆ ಹೆಚ್ಚು ಆಯಾಸವಾದಂತಿದೆ. ಈ ನಿನ್ನ ಆವೇಶದ ವರ್ತನೆಯನ್ನು ಜನರು ಬೇರೆ ರೀತಿಯಲ್ಲಿ ಅರ್ಥಮಾಡಿ ಕೊಳ್ಳುವರು. ಇಂತಹ ನಡಾವಳಿ ನಿಮ್ಮ ಮನೆತನದವರಿಗೆ ಸರಿಯಲ್ಲ. ಇದು ನಿನ್ನ ಅಂತಸ್ತಿಗೆ ಸರಿಹೋಗುವದಿಲ್ಲ." ಎಂದು ಅವಳ ಕೈಯನ್ನು ಹಿಡಿದು ಮನೆಯ ಕಡೆ ಕರೆದು ಕೊಂಡು ಹೋದನು. ಉಳಿದ ಮಿತ್ರರು ಮೆಲ್ಲನೆ ಇವರನ್ನು ಹಿಂಬಾಲಿಸಿದರು. ಮನೆ ಸಮೀಪಿಸಿದ ಕೂಡಲೇ, ಇವೆತ್‌ಳು ಅವನ ಕೈ ಕೊಸರಿ ಕೊಂಡು ಓಡಲಾರಂಭಿಸಿದಳು. ಕೂಡಲೇ. ಮಾಳಿಗೆಯ ಮೇಲಿನ ತನ್ನ ಕೋಣೆಗೆ ಹೋಗಿ, ಬಾಗಿಲನ್ನು ಹಾಕಿ ಕೊಂಡಳು.

ರಾತ್ರಿ ಊಟದ ಸಮಯದವರೆವಿಗೂ ಅವಳು ಕೆಳಗೆ ಬರಲೇ ಇಲ್ಲ. ಅವಳ ಮುಖ ಹೆಚ್ಚು ನಿಸ್ತೇಜ ವಾಗಿತ್ತು; ಗಂಭೀರ ಮುದ್ರೆಯನ್ನು ತಾಳಿದ ಅವಳ ವರ್ತನೆ ಯಾರಿಗೂ ಅರ್ಥವಾಗುವಂತಿರಲಿಲ್ಲ. ಊಟದ ಸಮಯದಲ್ಲಿ ಸರ್‌ವೀನ್ನೀಯು ಒಂದಂಗಡಿಯಲ್ಲಿ ಕೊಂಡುಕೊಂಡ ಕೆಲಸಗಾರನ ಪೋಷಾಕನ್ನು ಹಾಕಿಕೊಂಡು ಬಂದಿದ್ದನು. ಅವನು ಆ ಅರಿವೆಗಳನ್ನು ಧರಿಸಿ ಕೊಂಡು ಕೂಲಿಕಾರರಂತೆ ಅವರ ಮನೆಮಾತಿನ ಶೈಲಿಯಲ್ಲಿಯೇ ಮಾತನಾಡ ತೊಡಗಿದನು.

ಇವೆತ್‍ಳು ಬಲು ಅವಸರದಲ್ಲಿ ಇದ್ದಂತೆ ಕಂಡು ಬಂತು. ಅವಳ ಚಲನ ವಲನಗಳು, ಹಾವ ಭಾವಗಳು ಬಲು ಅವಸರದ ರೀತಿಯದಾಗಿದ್ದವು. ಕಾರಣವಿಲ್ಲದೆ ಹೀಗೇಕೆ ಗಡಿಬಿಡಿ ಮಾಡುತ್ತಿರುವಳೆಂಬುದು ಸರ್ವೀನ್ನೀಗೆ ತಿಳಿಯದಂತಿತ್ತು. ಅವಳು ಅವಸರದಲ್ಲಿ ತೀರ ಭಯಗ್ರಸ್ತಳಾದಂತೆ ತೋರಿತು. ಊಟದ ಕೊನೆಗೆ ಕಾಫಿ ಕುಡಿಯುವ ವಿಧಾನ ಮುಗಿದೊಡನೆಯೇ ಆತುರದಿಂದ ಇವೆತ್‍ಳು ತನ್ನ ಕೋಣೆಗೆ ಓಡಿ ಹೋದಳು. ಕೋಣೆಯಲ್ಲಿ ಕುಳಿತ ಅವಳಿಗೆ ಕೆಳಗಿನ ಜನರ ಕೋಲಾಹಲ, ಸಂತೋಷದ ಹರಟೆ ಕೇಳಿ ಬರುತ್ತಿದ್ದವು. ಕೇವಲೀಯರ್ ವಾಲ್‍ರೀಲೇಯ ಹಾಸ್ಯಮಯ ಮತ್ತು ಕುಚೇಷ್ಟೆಯ ಗಾಪೆ ಮಾತುಗಳು, ವೈಯುಕ್ತಿಕ ಟೀಕೆಗಳು, ಕೇವಲ ಕೆಳದರ್ಜೆಯ ಕಾಮುಕ ಗಂಡು ಹೆಣ್ಣಿನ ಸರಸ ವಿರಸಗಳು, ಅವಳಲ್ಲಿ ಅಧೈರ್ಯವನ್ನುಂಟು ಮಾಡುತ್ತಿದ್ದವು. ಅಂದು ಇವೆತ್‍ಳು ಕೈಕೊಳ್ಳಲಿರುವ ಮುಖ್ಯ ಕೆಲಸಕ್ಕೆ ಬಾಧಕವಾಗಿ ಪರಿಣಮಿಸ ಬಹುದೆಂದು ಯೋಚಿಸ ತೊಡಗಿದಳು. ಒಂದು ರೀತಿಯ ಭೀತಿಯಿಂದ ಕೆಳಗೆ ನಡೆಯುವ ವಿನೋದದ ಹರಟೆಯನ್ನು ಕೇಳುತ್ತ ಕೆಲಸಮಯ ಕುಳಿತುಕೊಂಡಳು. ಹೆಚ್ಚು ವೈನನ್ನು ಕುಡಿದ ಸರ್ವೀನ್ನೀಯು ಸಾಮಾನ್ಯ ಕೂಲಿ ಕಾರನಂತೆ ಅಭಿನಯಿಸ ತೊಡಗಿ, ತನ್ನ ಸಂಗಡಿಗರನ್ನು ನಾನಾ ಬಗೆಯ ಕುಚೋದ್ಯದ ಹೆಸರುಗಳಿಂದ ಕರೆಯುವ ರೀತಿ ಹೆಚ್ಚು ವಿನೋದವನ್ನುಂಟು ಮಾಡುತ್ತಿತ್ತು. ಅವನ ಅಭಿನಯ ಎಲ್ಲರನ್ನೂ ಹೆಚ್ಚಿನ ನಗೆಯಲ್ಲಿ ಕೆಡವಿತ್ತು.

ಇವೆತ್‍ಳು ಕೊನೆಯ ನಿರ್ಧಾರವನ್ನು ಕೈಕೊಂಡಳು. ಟೇಬಲದ ಬಳಿ ಹೋಗಿ, ಬಿಳಿ ಕಾಗದದ ಮೇಲೆ ಅವಳು ಬರೆದ ಕೊನೆಯ ಸಂದೇಶ ಹೀಗಿತ್ತು: —

"ಆದಿತ್ಯವಾರ, ರಾತ್ರಿ ಒಂಭತ್ತು ಗಂಟೆ. ಸೂಳೆಯಾಗಿ ಬಾಳುವುದು ನನಗೆ ಇಷ್ಟವಿಲ್ಲ. ಈ ಸೂಳೆಯ ಜೀವನದಲ್ಲಿ ಬಿದ್ದು ನನ್ನ ಪಾತಿವ್ರತ್ಯ ಹಾಳಾಗುವ ಮುನ್ನ ಓರ್ವನನ್ನು ಮದುವೆಯಾಗಬೇಕೆಂದು ನಿಶ್ಚಯಿಸಿದೆ. ಆದರೆ ಈ ಜನ್ಮದಲ್ಲಿ ನನ್ನನ್ನು ಯಾರೂ ಮದುವೆಯಾಗಲಾರರೆಂದು ನನಗೆ ಮನವರಿಕೆಯಾಗಿದೆ. ಆದುದರಿಂದ ಕ್ಲೋರೋಫಾರಂದಿಂದ ಸಾಯುತ್ತಲಿದ್ದೇನೆ. ಸಾವಿನ ರೀತಿಯನ್ನು ವಿವರಿಸುವ ಈ ನನ್ನ ಕೊನೆಯ ಸಂದೇಶ

ವನ್ನು ಬರೆದಿಟ್ಟು ಸಾಯುತ್ತಿರುವೆನು. ನನ್ನ ಸಾವಿಗೆ ಯಾರೂ ಹೊಣೆಗಾರರಲ್ಲವೆಂದು ಸಾರುತ್ತಲಿದ್ದೇನೆ.

"ಇಲ್ಲಿಯ ವರೆಗೆ ಸಾಕಿ ಸಲಹಿದ ತಾಯಿಯು ನನ್ನನ್ನು ಕ್ಷಮಿಸುವಳೆಂದು ನಂಬುತ್ತೇನೆ ಅವಳಿಗೆ ನನ್ನ ಮುದ್ದುಗಳು. ಕೊನೆಯ ನಮಸ್ಕಾರ.

—ಇವೆತ್"

ಈ ಪತ್ರವನ್ನು ಲಕೋಟೆಯಲ್ಲಿ ಮಡಚಿ, ಮೇಲೆ ತೊರಿಕೆಗೆಮಾತ್ರ ತನ್ನ ತಾಯಿಯ ಹೆಸರನ್ನು ಬರೆದು ಟೇಬಲದ ಮೇಲೆ ಇಟ್ಟಳು.

ಅವಳ ಮನಸ್ಸು ಹೆಚ್ಚು ಗೊಂದಲದಲ್ಲಿತ್ತು. ಕಿಟಕಿಯ ಹತ್ತಿರ ಬಂದು ನಿಂತು ತನ್ನ ನೀಳವಾದ ಕೂದಲುಗಳನ್ನು ಕೈಯಿಂದ ತೀಡಿಕೊಳ್ಳುತ್ತ ಬೀಸುತಿದ್ದ ಮಂದ ಮಾರುತದಿಂದ ಕೊಂಚ ಶಾಂತಿ ಪಡೆಯಲೆತ್ನಿಸಿದಳು. ಅಲ್ಲಿ ಕಿಟಕಿಯ ಹತ್ತಿರವೇ ಗಾಳಿ ಚೆನ್ನಾಗಿ ಬರುತ್ತಿದ್ದುದರಿಂದ ಒಂದು ಟೇಬಲದ ಮೇಲೆ ದೊಡ್ಡ ಪ್ರಮಾಣದ ಕ್ಲೋರೋಫಾರಂ ಬಾಟ್ಲಿಯನ್ನಿಟ್ಟಳು. ಅದರ ಬದಿಯಲ್ಲಿಯೇ ಅವಳು ಮಲಗುವ ಮಂಚವಿತ್ತು.

ಕೆಳಗೆ ಕಿಟಕಿಯ ಬಳಿಗೆ ಚೆನ್ನಾಗಿ ಬೆಳೆದು ನಿಂತ ರೋಜಾ ಗಿಡವು ತನ್ನ ಕೋಣೆಗೆ ಹೆಚ್ಚಿನ ಶೋಭೆಯನ್ನುಂಟು ಮಾಡಿತ್ತು. ಅದರಿಂದ ರಾತ್ರಿ ಸಮಯಗಳಲ್ಲಿ ಸುವಾಸನೆ ಬರುತ್ತಿತ್ತು. ಆ ವಾಸನೆಯನ್ನು ಸೇವಿಸಲೋಸುಗ ಕಿಟಕಿಯ ಬಳಿ ಕಣ್ಮುಚ್ಚಿ ಆ ಸುಖದಲ್ಲಿ ಮಗ್ನಳಾಗಿ ಕೊಂಚ ಸಮಯ ಅಲ್ಲಿಯೇ ನಿಂತು ಬಿಟ್ಟಳು. ಅವಳ ಕೋಣೆಯಲ್ಲಿ ಹೆಚ್ಚಿನ ಬೆಳಕೇ ಇರಲಿಲ್ಲ. ಪಂಚಮಿಯ ಚಂದ್ರನ ಬೆಳಕಿನಿಂದ ಇವೆತ್‌ಳ ನೊಂದ ಹೃದಯ ವಿಕಾಸಗೊಂಡಿತು. ಮೇಘಗಳ ನಡುನಡುವೆ ಹಾದು ಬರುವ ಚಂದ್ರನು ತನ್ನ ಕಾರ್ಯವನ್ನು ತಡೆಯುವ ಸಂದೇಶವನ್ನೀಯುತ್ತಿರುವಂತೆ ಇವೆತ್‌ಳಿಗೆ ಭಾಸವಾಯಿತು. ಇಷ್ಟಾದರೂ ಅವಳ ನಿರ್ಧಾರ ಬದಲಾಗುವಂತಿರಲಿಲ್ಲ.

ಇವೆತ್‌ಳು ಯೋಚಿಸತೊಡಗಿದಳು. ತಾನು ಸಾಯುವೆನೆಂಬ ದುಃಖದಾಯಕ ಯೋಚನೆ ಅವಳ ಮನಸ್ಸನ್ನು ಆವರಿಸಿತು. ಇದು ಅವಳನ್ನು ಅತೀವ ಯಾತನೆಯಲ್ಲಿ ಕೆಡವಿತು. ಉಸಿರು ಹಿಡಿಯುವಂತಾಗಿ ಮಾತುಗಳೇ ಹೊರಡದಂತಾದವು. ತನ್ನನ್ನು ಹೆಚ್ಚಿನ ಮಮತೆಯಿಂದ, ವಿಶ್ವಾಸದಿಂದ, ಸಲುಗೆಯಿಂದ, ಈ ಘೋರ ಕೃತ್ಯವನ್ನು ತಡೆಯಲು ಯಾರಾದರೂ

ಬರುವರೇನೋ ಎಂಬ ಭಾವನೆ ಅವಳ ತಲೆಯಲ್ಲಿ ಹಾದು ಹೋಯಿತು.

ಕೆಳಗೆ ಆನಂದ ಸಾಗರದಲ್ಲಿ ಮುಳುಗಿ ಹರಟೆ ಕೊಚ್ಚುತ್ತಿದ್ದ ತನ್ನ ಮಿತ್ರರ ಕೊಲಾಹಲ ಕೇಳಿಸುತ್ತಿತ್ತು. ಸರ್ ವೀನ್ನೀಯು ನಿಚ್ಚಳವಾದ ಸ್ವರದಲ್ಲಿ ಮಿಕ್ಕವರೆಲ್ಲರಿಗೆ ಒಂದು ವಿನೋದದ ಕತೆಯನ್ನು ಹೇಳುತ್ತಿರುವುದು ಅವಳ ಕಿವಿಗೆ ಕೇಳಿ ಬರುತ್ತಿತ್ತು. ನಡುನಡುವೆ ಮತ್ತಿತರರ ನಗುವಿನ ಆರ್ಭಟವೂ ಸ್ಪಷ್ಟವಾಗಿ ಕೇಳುತ್ತಿತ್ತು. ಎಲ್ಲರಿಗಿಂತಲೂ ತನ್ನ ತಾಯಿಯೇ ಹೆಚ್ಚು ನಗುತ್ತಿರುವುದನ್ನು ಕೇಳಿ ಇವೆತ್‌ಳು ಕೊಂಚ ಯೋಚನೆಗೊಳಗಾದಳು. ತಾನು ಹೆಚ್ಚು ಹೊತ್ತು ಸುಮ್ಮನಿರುವುದು ಒಳಿತಲ್ಲವೆಂದು ಒಂದು ಸಲ ನೆನೆಯುತ್ತಿದ್ದಳು. ಬರೆದಿಟ್ಟ ಕಾಗದವನ್ನು ಹರಿದೊಗೆದು ಕೆಳಗೆ ಹೋಗಿ ಎಲ್ಲರಂತೆ ತಾನೂ ನಕ್ಕು ನಲಿಯಲೇ ಎಂದು ಮತ್ತೊಂದು ಸಲ ಯೋಚಿಸುತ್ತಿದ್ದಳು. ಹೀಗೆ ಮನಸ್ಸು ವಿರುದ್ಧ ಯೋಚನೆಗಳಿಂದ ಹೊಯ್ದಾಡುತ್ತಿರಲು ಇವೆತ್‌ಳು ಕೊನೆಯ ನಿರ್ಧಾರಕ್ಕೆ ಬಂದಳು. ಬಾಗಿಲು ಭದ್ರವಾಗಿ ಚಿಲುಕ ಹಾಕಲ್ಪಟ್ಟಿರುವುದೆಂದು ನಿಶ್ಚಯ ಮಾಡಿಕೊಂಡು, ತನ್ನ ಹಾಸಿಗೆಯ ಬಳಿ ಇದ್ದ ಟೇಬಲನ್ನು ದೃಢ ಮನಸ್ಸಿನಿಂದ ಸಮೀಪಿಸಿದಳು. ಟೇಬಲದ ಮೇಲೆ ಇರಿಸಿದ್ದ ಕ್ಲೋರೋಫಾರಂ ಸೀಸೆಯ ಮುಚ್ಚಳವನ್ನು ತೆಗೆದು ಅದರೊಳಗಿನ ದ್ರಾವಕವನ್ನು ಕೊಂಚ ಹತ್ತಿಯ ಮೇಲೆ ಹಾಕಿಕೊಂಡಾಗ, ಒಂದು ಬಗೆಯ ಸಮಾಧಾನದ ಮತ್ತು ಬಲವತ್ತರವಾದ ವಾಸನೆ ಎಲ್ಲೆಡೆಯಲ್ಲಿಯೂ ಹಬ್ಬಿಕೊಂಡಿತು. ಮೂಗು ಮುರಿಯುವಂತಹ ವಾಸನೆ ಅವಳನ್ನು ಆವರಿಸಿತು. ಆ ದ್ರಾವಕದಿಂದ ಒದ್ದೆಯಾದ ಹತ್ತಿಯನ್ನು ತನ್ನ ಬಾಯಿಯವರೆಗೆ ತಂದುಕೊಂಡು ಮೆಲ್ಲನೆ ಹಾಸಿಗೆಯ ಮೇಲೆ ಒರಗಿಕೊಂಡಳು. ಅದರ ವಿಷವಾಯುವು ಸ್ವಲ್ಪಸ್ವಲ್ಪವಾಗಿ ಒಳಗೆ ಹೋಗುವಂತೆ ಬಾಯಿಯ ಉಸಿರಿನಿಂದ ಸೇವಿಸತೊಡಗಿದಳು. ಗಂಟಲವರೆವಿಗೆ ಆ ದ್ರಾವಕದ ಆವಿಯು ಹರಡಿಕೊಳ್ಳಲು ಕೊಂಚ ಕೆಮ್ಮಿ, ಅನಂತರ ಬಾಯಿ ಮುಚ್ಚಿಕೊಂಡಳು. ಆ ದ್ರಾವಕದ ವಿಷವಾಯುವು ಒಳಗೆ ಹೋದಂತೆಲ್ಲ ಮೂಗಿನ ಹತ್ತಿರವೇ ಇದ್ದ ಹತ್ತಿಯಿಂದ ಹೆಚ್ಚು ಪ್ರಮಾಣದ ಆ ವಿಷವಾಯುವನ್ನು ವಾಸನೆನೋಡುತೊಡಗಿದಳು. ಕಣ್ಣು ಮುಚ್ಚಿಕೊಂಡು ಮಲಗಿದ ಅವಳಿಗೆ ಕೊಂಚ ಕೊಂಚವಾಗಿ ಎಚ್ಚರತಪ್ಪ ತೊಡಗಿತು. ಅರೆ ಎಚ್ಚರದ

ಅವಸ್ಥೆಯಲ್ಲಿದ್ದ ಇವೆತ್‌ಳ ತಲೆಯಲ್ಲಿ ಅನೇಕ ರೀತಿಯ ಹುಚ್ಚು ಕಲ್ಪನೆಗಳು ಏಳತೊಡಗಿದವು.

ಆ ವಿಷವಾಯುವು ವ್ಯಾಪಿಸಿ ಕೊಂಡಂತೆಲ್ಲ ಇಲ್ಲಿಯ ವರೆಗೂ ಅತಿ ಭಾರವಾಗಿ ತೋರಿ ಬಂದ ಹೃದಯದ ಭಾರ ಹಗುರಾದಂತೆನಿಸಿತು. ತಾನು ಗಾಳಿಯಲ್ಲಿ ತೇಲಿ ಹೋಗುತ್ತಿರುವಂತೆ ಅವಳಿಗೆನಿಸಿತು. ಹೇಗೋ ಎಲ್ಲಿಯೋ ಗಾಳಿ ಮಾರ್ಗದಲ್ಲಿ ತನ್ನ ಶರೀರವು ತಾನಾಗಿಯೇ ತೇಲುತ್ತಿರುವಂತೆನಿಸಿತು. ಅವಳನ್ನು ಆವರಿಸಿದ ದುಃಖದ ಯೋಚನೆಗಳೆಲ್ಲವೂ ಮಾಯವಾಗಿದ್ದವು. ಕನಸಿನ ಪ್ರಪಂಚದಲ್ಲಿ, ದುಃಖವಿಲ್ಲದ ಒಂದು ಬಗೆಯ ಆನಂದದ ರಾಜ್ಯದಲ್ಲಿರುವಂತೆ ಇವೆತ್‌ಳಿಗೆನಿಸಿತು.

ತನ್ನ ಕೈಯಲ್ಲಿ ಹಿಡಿದ ಹತ್ತಿಯತುಂಡಿನಲ್ಲಿಯ ದ್ರಾವಕವು ಬತ್ತಿ ಹೋಗಿ ಅದು ಒಣಗಿದಂತೆನಿಸಿತು. ಅರೆ ಎಚ್ಚರದಲ್ಲಿದ್ದ ಇವೆತ್‌ಳು ಇನ್ನೂ ತನಗೆ ಸಾವು ಬಂದಿಲ್ಲವೆಂದು ಭಾವಿಸಿ, ತಡವರಿಸುತ್ತ ಹತ್ತಿರವೇ ಕೈಗೆ ನಿಲುಕುವಂತೆ ಟೇಬಲದಮೇಲೆ ಇರಿಸಿದ ಸೀಸೆಯನ್ನು ತೆಗೆದುಕೊಂಡು ಮತ್ತಿಷ್ಟು ದ್ರಾವಕವನ್ನು ಹತ್ತಿಯಮೇಲೆ ಹಾಕಿಕೊಂಡಳು. ಕೆಳಗಿನ ಜನರ ಕೋಲಾಹಲ ಸ್ವಲ್ಪ ಸ್ವಲ್ಪ ಕೇಳಿಸುತ್ತಿತ್ತು. ದೂರ, ಬಹುದೂರ, ಹೊಲಗಳಲ್ಲಿ.ರಾತ್ರಿಗಳಲ್ಲಿ ಆಗುವ ಸದ್ದೂ ಕೇಳಿಸುತ್ತಿತ್ತು. ಎಲ್ಲವೂ ಕನಸಿನಂತೆನಿಸಿದರೂ ತನ್ನಲ್ಲಿ ಇನ್ನೂ ಚೇತನವಿತ್ತೆಂತೆನಿಸಿತು. ಆದುರಿಂದ ಹೊಸದಾಗಿ ದ್ರಾವಕದಿಂದ ತೋಯಿಸಿದ ಹತ್ತಿಯತುಂಡನ್ನು ಮತ್ತೆ ಬಾಯಿಯ ಹತ್ತಿರ ತುಟಿಗಳಮೇಲೆ ಇರಿಸಿಕೊಂಡು ಮೆಲ್ಲನೆ ಉಸಿರಾಡಿಸ ತೊಡಗಿದಳು.

ದ್ರಾವಕದ ವಿಷವಾಯುವು ಅವಳನ್ನು ಅಜ್ಞಾನಾವಸ್ಥೆಯಲ್ಲಿ ಕೆಡವುತ್ತಿತ್ತು. ಆವಳ ಶಾರೀರಕ ವ್ಯಾಪಾರದಮೇಲೆ ಇನ್ನೂ ಹಿಡಿತ ಪೂರ್ಣವಾಗಿ ಸಡಿಲವಾಗಿರಲಿಲ್ಲ. ಒಂದು ದೈವಿಕ ಶಕ್ತಿಯು ದಿವ್ಯ ಆವೇಶದಿಂದ ಅವಳನ್ನು ಮೇಲಿನ ಸುಖದಲೋಕಕ್ಕೆ ಎತ್ತಿಕೊಂಡುಹೋಗುವಾಗ ಆಗುವ ಆನಂದದ ಅನುಭವ ಇವೆತ್‌ಳಿಗಾಯಿತು. ಆ ಅನುಭವದ ವಿವರ ಹೀಗಿತ್ತುಃ–ಪುಷ್ಪ ಸಾಗರದಲ್ಲಿ ಸಾಗುತ್ತಿದ್ದ ನೌಕೆಯಲ್ಲಿ ಮೆಲ್ಲನೆ ತೇಲಿಹೋಗುತ್ತಿದ್ದಾಳೆ ಇವೆತ್. ಸುತ್ತಲೂ ಜನರು ಅವಳನ್ನು ಪ್ರೊತ್ಸಾಹಿಸುತಿದ್ದಾರೆ. ನಾವೆಯು

ಸಾಗುತ್ತಲಿದೆ. ಆದರೆ! ಆದರೆ!! ಒಮ್ಮಿಂದೊಮ್ಮೆ ತನ್ನ ನಾವೆಯು ಮತ್ತೆ ಅವಳನ್ನು ತಮ್ಮ ಮನೆಗೆ ಕರೆದುಕೊಂಡು ಬಂದಿತು. ಅಲ್ಲಿ ರಾಜಕುಮಾರನಂತೆ ಅಲಂಕೃತನಾದ ಸರ್ವೀನ್ನೀಯು ಅವಳನ್ನು ಸ್ವಾಗತಿಸುತ್ತಲಿದ್ದಾನೆ, ಅವನಿಂದ ಸ್ವಾಗತಿಸಲ್ಪಟ್ಟು ಇಬ್ಬರೂ ಹೋರಿಗಳ ಪಂದ್ಯಾಟವನ್ನು ನೋಡಲು ಹೋಗುತ್ತಿದ್ದಾರೆ. ಜನರ ಕೋಲಾಹಲದ ನಡುವೆ ಇಬ್ಬರೂ ಕೈಗೆ ಕೈಹಚ್ಚಿ, ಮೈಗೆ ಮೈತಾಗಿ ಭರದಿಂದ ಸಾಗಿದ್ದಾರೆ....ಆದರೆ?

ಅಲ್ಲಿಗೆ ಅವಳ ಕನಸಿನ ಅನುಭವ ಕೊನೆಗೊಂಡಿತು. ಮತ್ತೆ ಎಚ್ಚರವಾಯಿತು. ತಾನಿನ್ನೂ ಸತ್ತಿಲ್ಲವೆಂದು ನಿರ್ಧಾರ ಮಾಡಿಕೊಂಡಳು. ಹಿಂದಿನ ಕನಸಿನ ವಿವರವೆಲ್ಲ ಮರೆತು ಹೋಗಿತ್ತು. ಎದ್ದು ಕುಳಿತುಕೊಳ್ಳಲು ಶಕ್ತಿ ಇರಲಿಲ್ಲ. ಅವಳ ಆಗಿನ ಸ್ಥಿತಿಯಲ್ಲಿ ಆವೇಗದ ಅವಾಂತರವಿರಲಿಲ್ಲ; ಉದ್ವೇಗದ ದುಃಖವಿರಲಿಲ್ಲ; ಜೀವನದಲ್ಲಿಯ ದುಃಖಸನ್ನಿವೇಶಗಳ ತಾಕಲಾಟವಿರಲಿಲ್ಲ. ಎಲ್ಲವೂ ಶಾಂತಮಯವಾಗಿತ್ತು.

ಮೆಲ್ಲನೆ ಉಸಿರಾಡಿಸುತ್ತ ಕಿಟಕಿಯಿಂದ ಕಾಣಿಸುವ ಚಂದ್ರನನ್ನು ಮತ್ತೊಮ್ಮೆ ನೋಡಿದಳು. ಗಿಡಗಳ ಮರೆಯಲ್ಲಿ ಕಳ್ಳನಂತೆ ಸುಳಿದಾಡುವ ಚಂದ್ರನ ನೋಟ ಅವಳಿಗೆ ಸಂತೋಷವನ್ನುಂಟು ಮಾಡಿತು. ಕ್ಲೋರೋಫಾರಂ ದ್ರಾವಕದ ವಾಸನೆಯಿಂದ ಅವಳ ಹೃದಯದ ಆವೇಗ, ದುಃಖ ಕಡಿಮೆಯಾದಂತಿತ್ತು. ಜೀವನದ ಬಗ್ಗೆ ಉಂಟಾದ ಜಿಗುಪ್ಸೆಯ ಭಾವನೆಯೂ ಕಡಿಮೆಯಾಗಿತ್ತು. ಸಾಯಬೇಕೆಂದು ಆತುರಗೊಂಡ ಅವಳ ಮನೋನಿಶ್ಚಯ ಕೊಂಚ ಸಡಿಲಾಗುವಂತಿತ್ತು.

ತಾನೇಕೆ ಜೀವಂತ ಇದ್ದು ಸುಖದ ಬಾಳು ಬಾಳಬಾರದು? ತನ್ನನ್ನು ಜನರೇಕೆ ಪ್ರೀತಿಸುವದಿಲ್ಲ? ತಾನು ನಿರ್ಮಲ ಪ್ರವರ್ತನಳೆಂದು ಜನರೇಕೆ ಆದರಿಸಿ ಮನೆಯ ಹೆಣ್ಣೆಂದು ಪರಿಗಣಿಸಬಾರದು? ಮಾನವಲೋಕದ ಯುವಕನು ತನ್ನನ್ನು ಹೆಂಡತಿಯಾಗಿ ಪರಿಗ್ರಹಿಸದಿರಲು ತನ್ನಲ್ಲಿರುವ ಅವ ಗುಣಗಳಾವವು? ತಾನೂ ಇತರ ಕುಲೀನ ಸ್ತ್ರೀಯರಂತೆ ಸಂಸಾರಿಯಾಗಿ ಬಾಳುವುದು ಸುಲಭವೆಂದು ಅವಳ ಮನಸ್ಸು ಹೇಳುತ್ತಿತ್ತು. ಜೀವನದಲ್ಲಿ ಎಲ್ಲೆಡೆಗೂ ಸುಖ, ಆನಂದ, ಉತ್ಸಾಹ ತುಂಬಿಕೊಂಡಿವೆ. ಇವುಗಳು ಜಿವಿಸಲು ತನ್ನನು! ಆಹ್ವಾನಿಸುತ್ತಿರುವವೆಂದು ನೆನೆದಳು.

ಈ ಬಗೆಯ ಅರೆಎಚ್ಚರದ ಸನ್ನಿವೇಶದಲ್ಲಿ ಇವೆತ್‌ಳು ಮತ್ತೊಮ್ಮೆ ಆ ದ್ರಾವಕವನ್ನು ಹತ್ತಿಯ ಮೇಲೆ ಕೊಡವಿಕೊಂಡು ಅ ವಿಷವಾಯು ವನ್ನು ವಾಸನೆ ನೋಡುತ್ತ ಉಸಿರಾಡಿಸತೊಡಗಿದಳು. ಈ ಸಲ ಆ ದ್ರಾವಕವು ಹೆಚ್ಚಿನ ಪ್ರಮಾಣದಲ್ಲಿ ಬಿದ್ದಿರಬೇಕು. ಅದರ ಸೇವನೆಯಿಂದ ತಾನು ಈ ಸಲ ಸಾಯಲೇಬೇಕೆಂಬ ನಿರ್ಧಾರ ಇವೆತ್‌ಳದಾಗಿತ್ತು. ಆದುದರಿಂದ ಹೆಚ್ಚಿನ ಆವೇಗದಿಂದ ಉಸಿರಾಡಿಸುತ್ತ, ವಾಸನೆ ನೋಡುತ್ತಿದ್ದಳು.

ಮಲಗಿದಲ್ಲಿಂದಲೇ ಅವಳು ಚಂದ್ರನನ್ನು ನೋಡಿದಳು. ಅದರಲ್ಲಿ ಓರ್ವ ಹೆಣ್ಣಿನ ಆಕೃತಿಯನ್ನು ಕಂಡಳು. ಆ ಹೆಣ್ಣು ಕೆಳಗಿನ ಜಗತ್ತನ್ನು ಕೇವಲ ತಾತ್ಸಾರದಿಂದ ನೋಡುತ್ತಿದ್ದಂತೆ ಕಂಡು ಬಂತು. ಅವಳ ಗಂಭೀರ ವಾದ ಮುಖದಿಂದ ಒಂದು ಹಾಡು ಹೊರ ಬರುತ್ತಿತ್ತು. ಸುಸ್ವರದಿಂದ ಹಾಡುತ್ತಿದ್ದ ಆ ಭಾವ ಗೀತೆ ಪ್ರೇಮದ ಒಂದು ದಿವ್ಯ ಸಂದೇಶವನ್ನು ಸಾರು ತ್ತಿತ್ತು. ಈ ಗೀತೆಗೆ ಸರಿಯಾಗಿ ಮನೆಯಲ್ಲಿಯೂ ಯಾರೋ ಪಿಯಾನೋ ಬಾರಿಸುತ್ತಿರಬೇಕೆಂದು ಇವೆತ್‌ಳಿಗೆನಿಸಿತು. ಈ ಅರೆ ಎಚ್ಚರದ ಸ್ಥಿತಿಯಲ್ಲಿ ಅವಳು ಮತ್ತೊಮ್ಮೆ ಕಂಡ ಕನಸಿನ ವಿವರ ಹೀಗಿತ್ತು:-

ಇವೆತ್‌ಳು ರೆಕ್ಕೆಗಳಿಂದ ನಭೋ ಮಂಡಲದಲ್ಲಿ ಹಾರುತ್ತಿರುವಂತೆನಿ ಸಿತು. ನದಿಗಳ ಮೇಲೆ, ಪರ್ವತಗಳ ಶಿಖರಗಳ ಮೇಲೆ, ಮೇಘಗಳ ನಡುವೆ, ಹೆಚ್ಚಿನ ಹಿಗ್ಗಿನಲ್ಲಿ, ಮೈಮರೆತ್ತ ಸುಖದಲ್ಲಿ, ಗಾಳಿಗೂ ಹಗುರಾಗಿ ತೇಲಿ ಹೋಗುತ್ತಿರುವಂತೆನಿಸಿತು. ವೇಗವಾಗಿ ಅವಳು ಹಾರುತ್ತಿರುವುದ ರಿಂದ ಕೆಳಗಿನ ಯಾವ ಪ್ರದೇಶವನ್ನೂ ಗುರುತಿಸಲು ಸಾಧ್ಯವಿರಲಿಲ್ಲ. ಹಾರಿ, ಹಾರಿ, ಕೊನೆಗೆ ಅವಳೊಂದು ಸರೋವರದ ದಂಡೆಯಲ್ಲಿ ಇಳಿದು ಮೀನನ್ನು ಹಿಡಿಯುವ ಕೆಲಸದಲ್ಲಿ ತೊಡಗಿದಳು. ಕೊಳದ ನೀರಿನಲ್ಲೆಸೆದ ಜಾಲದಲ್ಲಿ ಒಂದು ಮೀನು ಸಿಕ್ಕಿಬಿದ್ದಿತೆಂದು ಹರುಷದಿಂದ ಅದನ್ನು ಬಯ ಲಿಗೆಳೆದು ಒಂದು ದಿವ್ಯ ಮುತ್ತಿನ ಹಾರ ಅದರೊಂದಿಗೆ ಬರಲು ಅದನ್ನು ಇವೆತ್‌ಳು ಆತುರದಿಂದ ಕೈಯಲ್ಲಿ ತೆಗೆದುಕೊಂಡು ಅಕ್ಕರೆಯಿಂದ ನೋಡ ತೊಡಗಿದಳು. ಅನೇಕ ದಿನಗಳಿಂದ ಬಲು ಆಸೆಯಿಂದ ಪಡೆಯಬೇಕೆಂದೆನಿ ಸಿದ ಮುತ್ತಿನ ಮಾಲೆ ದೊರಕಿತೆಂದು ಹಿಗ್ಗುತ್ತಿರುವ ವೇಳೆಗೆ ಸರ್‌ವೀ ನ್ನೀಯು ಎಲ್ಲಿಂದಲೋ ಅವಳ ಹತ್ತಿರ ಬಂದು ಕುಳಿತಿದ್ದ. ಅವಳಿಗೆ ತಿಳಿಯ

ದಂತೆ ಒಂದು ಸೇರಿದ ಸರ್‌ವೀನ್ನೀಯೂ ಮೀನು ಹಿಡಿಯುವ ಕೆಲಸಸಲ್ಲಿ ತೊಡಗಿದ್ದ. ಅವನಿಗೊಂದು ಕಟ್ಟಿಗೆಯ ಕುದುರೆ ದೊರೆಯಿತು. ಮುಂದೆ........?

ಈ ವೇಳೆಗೆ ಸರಿಯಾಗಿ ಆ ವಿಷವಾಯುವಿನ ಮಬ್ಬು ಕೊಂಚ ಇಳಿದಂತಾಗಿ ತನ್ನ ಕೋಣೆಯ ಬಾಗಿಲನ್ನು ಯಾರೋ ಬಡಿಯುತ್ತಿದ್ದಂತೆ ಕೇಳಿಸಿತು. ಪೂರ್ಣ ಎಚ್ಚರವಿರವಿಲ್ಲ. "ನಿನ್ನ ಕೋಣೆಯೊಳಗಿನ ಮೇಣಬತ್ತಿಯ ದೀಪವನ್ನು ಆರಿಸು; ಅಪಾಯಕರ" ಎಂಬ ಮಾತುಗಳು ತಾಯಿಯಾದ ಓಬಾರ್ದಿಯು, ಮತ್ತು ಸರ್‌ವೀನ್ನೀಯು ಎಚ್ಚರಿಸುತ್ತಿರುವಂತೆ ಕೇಳಿಸಿತು. ಇವರಿಬ್ಬರ ಈ ಎಚ್ಚರದ ನುಡಿಯನ್ನು ಕೆಳಗಿನಿಂದ ಎಲ್ಲರೂ ಏಕ ಸ್ವರದಲ್ಲಿ ಒದರುವುದು ಇವೆತ್‌ಳ ಕಿವಿಗೆ ಬಿತ್ತು.

ಇವೆತ್‌ಳಿಗೆ ಹಾಸಿಗೆಯಿಂದೇಳುವುದಂತೂ ಸಾಧ್ಯವೇ ಇರಲಿಲ್ಲ. ಸಾಯಲೇಬೇಕೆಂದು ನಿರ್ಧರಿಸಿದ್ದು, ಕ್ಲೋರೋಫಾರಂ ವಾಸನೆಯಿಂದ ಸಾವು ಎಲ್ಲರಿಗೂ ಬರಲಾರದೆಂದು ಇಲ್ಲಿಯವರೆಗೆ ಅವಳು ಮಾಡಿದ ಪ್ರಯತ್ನಗಳಿಂದ ತಿಳಿದು ಬಂದಿತ್ತು. ಆದುದರಿಂದ ಈ ತಮಾಷೆಯ ಪ್ರಕರಣವು ಅಪಹಾಸ್ಯವಾಗಿ ಕೊನೆಗಾಣದಂತೆ ನೋಡಿಕೊಳ್ಳುವ ಉದ್ದೇಶದಿಂದ ಯಾರು ಏನು ಮಾಡಿದರೂ, ಮಾತನಾಡದೇ ಸುಮ್ಮನಿದ್ದು, ಎಚ್ಚರ ತಪ್ಪಿದವಳಂತೆ ನಟಿಸುವುದೇ ಉತ್ತಮ ಮಾರ್ಗವೆಂದು ನಿಶ್ಚಯಿಸಿ ಮತ್ತೊಮ್ಮೆ ಆ ದ್ರಾವಕವನ್ನು ದೂರದಿಂದಲೇ ವಾಸನೆ ನೋಡಿದಳು. ಈ ಹೊತ್ತಿಗೆ ಆ ದ್ರಾವಕದ ವಿಷವಾತಾವರಣವು ಆ ಕೋಣೆಯಲ್ಲಿ ಸಾಕಷ್ಟು ಹರಡಿಕೊಂಡಿತ್ತು; ಈ ಸನ್ನಿವೇಶವೂ ಅವಳಿಗೆ ಅನುಕೂಲವಾಗಿದ್ದುದರಿಂದ ಸತ್ತವಳಂತೆ ಹಾಸಿಗೆಯ ಮೇಲೆ ಕೈಕಾಲು ಹರವಿಕೊಂಡು ಮಲಗಿದಳು.

ಕೆಳಗೆ ಜನರ ನಡುವೆ ಇದ್ದ ಓಬಾರ್ದಿಯು "ನನಗೆ ಗಾಬರಿಯಾಗತೊಡಗಿದೆ. ಹುಚ್ಚು ಹುಡುಗಿ ದೀಪವನ್ನು ಆರಿಸದೆ ಎಚ್ಚರತಪ್ಪಿ ಮಲಗಿದ್ದಾಳೆ. ಮನೆಯ ಹೆಣ್ಣು ಆಳಾದ ಕ್ಲೆಮೆನ್ಸಳನ್ನು ಕಳುಹಿ ದೀಪವನ್ನು ಆರಿಸಿ, ತೆರೆದಿರುವ ಕಿಟಕಿಯನ್ನು ಮುಚ್ಚಿ ಬರುವಂತೆ ಹೇಳುವೆನು." ಎಂದು ಮಾತನಾಡಿದುದು ಇವೆತ್‌ಳಿಗೆ ಕೇಳಿಸಿತು. ಕೂಡಲೇ ಕ್ಲೆಮೆನ್ಸಳು ತನ್ನ ಕೋಣೆಯ ಬಾಗಿಲನ್ನು ಬಡಿಯುವುದು ಕೇಳಿಸಿದರೂ ಇವೆತ್‌ಳು ಸುಮ್ಮನೇ

ಮಲಗಿಬಿಟ್ಟಳು. ಅವಳು ಬಾಗಿಲನ್ನು ಬಡಿಯುತ್ತ “ದೀಪವನ್ನು ಆರಿಸಿ ಮಲಗಬೇಕೆಂದು ನಿಮ್ಮ ತಾಯಿಯವರು ಹೇಳಿರುವರು. ಕಿಟಕಿಯನ್ನು ಸಹಾ ಮುಚ್ಚಿ ಮಲಗಬೇಕಂತೆ” ಎಂದು ಹೇಳಿ ಕೊಂಚ ಹೊತ್ತು ಸುಮ್ಮನಿದ್ದು ಮತ್ತೆ ಬಾಗಿಲನ್ನು ಬಡಿಯುತ್ತ ಇವೆತ್‌ಳ ಹೆಸರು ಹಿಡಿದು ಕೂಗಿಕೊಂಡಳು. ಎಷ್ಟು ಒದರಿದರೂ ಕೋಣೆಯೊಳಗಿಂದ ಪ್ರತ್ಯುತ್ತರ ಬಾರದಿರಲು ಕೆಳಗೆ ಹೋಗಿ “ನಿಮ್ಮ ಮಗಳು ಎಚ್ಚರ ತಪ್ಪಿ ನಿದ್ದೆ ಮಾಡುತ್ತಿರುವಂತೆ ಕಾಣುತ್ತದೆ. ಬಾಗಿಲನ್ನು ಒಳಗಿನಿಂದ ಚಿಲುಕ ಹಾಕಿಕೊಂಡು ಮಲಗಿರುವಳು. ನಾನೆಷ್ಟು ಕೂಗಿದರೂ ಏಳಲಿಲ್ಲ. ಏನು ಮಾಡುವುದು ಹೇಳಿ” ಎಂದು ಬಿನ್ನವಿಸಿಕೊಂಡ ಮಾತು ಇವೆತ್‌ಳಿಗೆ ಕೇಳಿಸಿತು.

ಓಬಾರ್ದಿಯು ಕ್ಲೆಮನ್ಸಳ ವರದಿಯನ್ನು ಕೇಳಿ ನಿರುತ್ಸಾಹದಿಂದ “ಇವೆತ್‌ಳು, ಎಂದೂ ಹೀಗೆ ಎಚ್ಚರತಪ್ಪಿ ಮಲಗುವ ಸ್ವಭಾವದವಳಲ್ಲ. ಅವಳು ಹೀಗೆ ನಿದ್ರೆಹೋಗುವುದೂ ಒಳಿತಲ್ಲ. ಅವಳನ್ನು ಎಚ್ಚರಿಸುವ ಬಗೆಯಾದರೂ ಹೇಗೆ ? ” ಎಂದು ಚಿಂತೆಗೊಳಗಾಗಲು, ಎಲ್ಲರೂ ಸೇರಿ ಅವಳನ್ನು ಕೂಗಿ ಎಚ್ಚರಿಸುವದೆಂದು ನಿರ್ಧರಿಸಿದರು. ಅವಳು ಮಲಗಿದ್ದ ಕೋಣೆಯ ಕಿಟಕಿಯು ತೆರೆದಿದ್ದುದರಿಂದ ಎಲ್ಲರೂ ಅದರ ಕೆಳಗೆ ನೇರವಾಗಿ ನಿಂತು “ಇವೆತ್‌ಳಿಗೆ ಸುಖವಾಗಲಿ ! ಇವೆತ್‌ಳು ಸುಖನಿದ್ರೆಯನ್ನು ಪಡೆಯಲಿ ! ಇವೆತ್‌ಳಿಗೆ ಸುಖವಾಗಲಿ!! ಸುಖವಾಗಲಿ!!! ” ಎಂದು ಎಷ್ಟು ಗಟ್ಟಿಯಾಗಿ ಕೂಗಿಕೊಂಡರೂ ಅವಳೇನು ಎದ್ದು ಬರಲಿಲ್ಲ. ಹೀಗೆ ತಮ್ಮ ಪ್ರಯತ್ನವು ಫಲಕಾರಿಯಾಗದಿರಲು, ಓಬಾರ್ದಿಯು ಗಾಬರಿಗೊಂಡ ಸ್ವರದಲ್ಲಿ ಬಹಳ ದೀನವದನದಿಂದ “ನನಗೇಕೋ ಭಯವಾಗುತ್ತಿದೆ. ಇವೆತ್‌ಳ ದಿನದ ವರ್ತನೆ ನನಗೆ ತಿಳಿದಿದೆ. ಎಂದೂ ಅವಳು ಈ ರೀತಿಯಾಗಿ ಎಚ್ಚರ ತಪ್ಪಿ ಮಲಗಿದವಳಲ್ಲ. ಒಳಗೆಏನೋ ವಿಚಿತ್ರವಾದ, ಭಯಾನಕವಾದ ಕೆಲಸ ನಡೆದಿರಬೇಕು. ನನಗೆ ನೆಮ್ಮದಿಯೆನಿಸುವುದಿಲ್ಲ. ನನ್ನ ಮಗಳಿಗೆ ಯಾವ ಅಪಾಯವೂ ಆಗಿರಲಾರದೆಂದು ನೆನೆಯುತ್ತೇನೆ” ಎಂದು ಓಬಾರ್ದಿಯು ಪೇಚಾಡುವುದನ್ನು ಕಂಡು ಎಲ್ಲರೂ ಮರುಗಿದರು.

ಆ ಬೆಳುದಿಂಗಳ ಬೆಳಕಿನಲ್ಲಿ ಸರ್‌ವೀನ್ನಿಯು ರೋಜಾಗಿಡದ ಬಳ್ಳಿಗಳ ಕೆಲವು ಎಸಳುಗಳನ್ನು ಮತ್ತಿತರ ಹೂವಿನಬಳ್ಳಿಯ ಎಲೆಗಳನ್ನು

ಕಿತ್ತಿ ಕಿಟಕಿಯ ಮೂಲಕ ಕೋಣೆಯ ಒಳಗೆ ಎಸೆದ. ಅನೇಕ ರೋಜಾ ಹೂಗಳನ್ನು ಅವನು ಎಸೆದಂತೆಲ್ಲ ಬೇಕೆಂದು ಮಲಗಿದ ಅವಳ ಹಾಸಿಗೆಯ ಮೇಲೆ ಮತ್ತು ಅವಳ ಮೈಮೇಲೆಯೂ ಬಿದ್ದುದರಿಂದ ಆ ನೋಟ ಒಂದು ರೀತಿಯಲ್ಲಿ ಅಂದವಾಗಿಯೇ ಕಾಣುತ್ತಿತ್ತು. ಆದರೂ ಇವೆತ್‌ಳು ಎದ್ದು ಬರುವಗೋಜಿಗೆ ಹೋಗಲೇ ಇಲ್ಲ. ಕೆಳಗಿನಿಂದಲೇ, ತಾಯಿಯಾದ ಓಬಾರ್ದಿಯು "ಮಗೂ, ಇವೆತ್ ! ಏನಾಗಿದೆಯಮ್ಮಾ ನಿನಗೆ ? ಎದ್ದು ಮಾತನಾಡು" ಎಂದು ಅಳುವ ಸ್ವರದಲ್ಲಿ ಕೊರಳೆತ್ತಿ ಬೇಡಿಕೊಂಡಳು.

ಸರ್‌ವೀನ್ಸ್ನೀಯು " ಇವೆತ್ ! ಇದು ನಿನಗೆ ಸರಿಯಲ್ಲ. ನೀನು ಬಾಗಿಲು ತೆಗೆದು ಹೊರಗೆ ಬಾರದಿದ್ದರೆ, ನಾನೇ, ಕಿಟಕಿಯ ಮೂಲಕ ನಿನ್ನ ಕೋಣೆಯನ್ನು ಪ್ರವೇಶಿಸುವೆನು" ಎಂದು ಸಾರಿದ.

ಕೆವೇಲಿಯರನಿಗೆ ಕೋಪ ಬಂದಿತ್ತು. ಅದೇ ಸಿಟ್ಟಿನ ಭರದಲ್ಲಿಯೇ, " ಈ ಮಾರ್ಗ ಇವೆತ್‌ಳು ಅನುಸರಿಸುವುದು ಉಚಿತವಲ್ಲ. ಸರ್‌ವೀನ್ಸ್ನೀಯವರೊಬ್ಬರೇ ಕಿಟಕಿಯನ್ನು ಹತ್ತಿ ಹೋಗುವುದಂತೂ ನನಗೊಪ್ಪದ ಮಾತು. ಅವರೊಬ್ಬರಿಗೇ ಏತಕ್ಕೆ ಈ ಹಂಬಲ ? ನಾವೆಲ್ಲಾರೂ ಮತ್ತೊಮ್ಮೆ ಅವಳನ್ನು ಕೂಗಿ ಕರೆಯುವ. ಅವಳು ಕೆಳಗಿಳಿದು ಬರಬಹುದು. ಸರ್‌ವೀನ್ಸ್ನೀಯವರೇನು ಹೆಚ್ಚು ?" ಎಂದು ಎತ್ತರದ ಸ್ವರದಲ್ಲಿ ಕೂಗಿಕೊಂಡ.

ಅಲ್ಲಿ ಸೇರಿದವರೆಲ್ಲರೂ ಇವೆತ್‌ಳು ಬೇಕೆಂದು, ಹೆಚ್ಚಿನ ಕುಚೇಷ್ಟೆಗಾಗಿ ಹೀಗೆ ವರ್ತಿಸುತ್ತಿರುವಳೆಂದು ಭಾವಿಸಿ ಮತ್ತೊಮ್ಮೆ ಏಕಕಂಠದಿಂದ "ಹೀಗೆ ಮುಷ್ಕರ ಹೂಡುವುದು ನಿನಗೆ ಸರಿಯಲ್ಲ, ಇವೆತ್. ಸರ್‌ವೀನ್ಸ್ನೀಯು ಒಬ್ಬರೇ ನಿನ್ನ ಕೋಣೆಗೆ ಬರುವುದನ್ನು ನಾವು ತಡೆದು ನಿಲ್ಲಿಸುತ್ತೇವೆ." ಎಂದು ಒದರಿದರು.

ಸರ್‌ವೀನ್ಸ್ನೀಯು ಮಾತ್ರ ಈ ಗೊಂದಲದಿಂದ ದೂರ ಸರಿದು ಸುಮ್ಮನೇ ನಿಂತಿದ್ದನು.

ಇವೆತ್‌ಳಿಂದ ಪ್ರಾಡುತ್ತರಬಾರದಿರಲು, ಓಬಾರ್ದಿಯ ದುಗುಡ ಹೆಚ್ಚಿತು. "ಅಯ್ಯೋ, ಇನ್ನು ಎಷ್ಟುದೂರ ಪರೀಕ್ಷೆಮಾಡುವುದು ? ಬೆಂಕಿಯೊಂದಿಗೆ ಸರಸವೇ ? ಯಾರಾದರೂ ಒಬ್ಬರು ಕಿಟಕಿಯಿಂದ ಕೋಣೆಯೊಳಗೆ ಹೋಗಿ ನಿಜಸ್ಥಿತಿಯನ್ನು ಅರಿಯಲೇಬೇಕು." ಎಂದು ತನ್ನ

ದುಃಖವನ್ನು ತೋಡಿಕೊಂಡಳು.

"ಇವೆತ್‌ಳಿಗೆ ಡ್ಯೂಕರಾದ ಸರ್‌ವೀನ್ನೀಯವರ ಮೇಲೆ ಹೆಚ್ಚಿನ ಮಮತೆ, ಅವರೇ........" ಎಂದು ನಾಟಕೀಯ ಸೋಗಿನಲ್ಲಿ ರಾಜಕುಮಾರ ಕ್ರಾವಲೋವನು ಸೂಚಿಸಿದ.

ಆದರೆ ಕೇವಲೀಯರ್ ಮಹಾಶಯನು ಮುಂದೆ ಬಂದು "ಅದೇಕೆ? ಚೀಟಿ ಹಾಕುವ. ಯಾರ ಹೆಸರು ಬರುವುದೋ ಅವರೇ ಈ ಕೆಲಸ ಕೈಕೊಳ್ಳಲಿ. ಇದರಿಂದ ಯಾರಿಗೂ ನೋವಾಗುವುದಿಲ್ಲ" ಎಂದು ಸಲಹೆಯನ್ನಿತ್ತ. ಪ್ರತ್ಯೇಕ ಚೀಟಿಗಳಲ್ಲಿ ಒಬ್ಬೊಬ್ಬರ ಹೆಸರನ್ನು ಬರೆದು, ಅವುಗಳನ್ನು ಸಮವಾಗಿ ಮಡಚಿದ ನಂತರ ಓಬಾರ್ದಿಯು ಅದರೊಳಗಿಂದ ಒಂದು ಚೀಟಿಯನ್ನು ತೆಗೆಯಲು, ರಾಜಕುಮಾರನ ಹೆಸರೇ ಬಂದಿತು. "ರಾಜಕುಮಾರನಿಗೆ ಜಯವಾಗಲಿ" ಎಂದು ಎಲ್ಲರೂ ಕೂಗಿಕೊಂಡರು.

ರಾಜಕುಮಾರನಿಗೆ ಈ ಗೆಲುವು ಸಂತೋಷವನ್ನುಂಟು ಮಾಡಲಿಲ್ಲ. ಅವನು ಪೆಚ್ಚು ಮೋರೆಯಿಂದ ಮೇಲೆ ಕೆಳಗೆ ನೋಡತೊಡಗಿದ.ಆನಂದದ ಬದಲು ಸಂಕಟ ಪಡುತ್ತ ಯೋಚಿಸುತ್ತಿರುವ ಅವನ ಈ ಅವಸ್ಥೆಯನ್ನು ಕಂಡು ಕಿವೇಲಿಯರ್ ವಾಲ್‌ರೀಲೆ, "ಏನು ಏತಕ್ಕೆ ಯೋಚನೆ? ಸಾಗಿರಿ ಮುಂದೆ ರಾಜಕುಮಾರರೇ" ಎಂದು ಹೇಳಿದ.

"ಏನೂ ಇಲ್ಲ....ಆದರೆ....ಆದರೆ....ಕಿಟಕಿಯನ್ನು ಸಮೀಪಿಸಲು ನಿಚ್ಚಣಿಕೆ ಬೇಕಲ್ಲ.'' ಎಂದು ಮೆಲ್ಲನೆ ನುಡಿದ.

ಅವನ ಈ ಹುಚ್ಚು ಕಲ್ಪನೆಗೆ ಎಲ್ಲರೂ ಬಿದ್ದು ಬಿದ್ದು ನಗತೊಡಗಿದರು. ಸಾವಾಲ್‌ನು ಮುಂದೆ ಬಂದು "ಅದೇತಕ್ಕೆ ಯೋಚನೆ ರಾಜಕುಮಾರರೇ? ನಾವು ನಿಮಗೆ ನೆರವಾಗುವೆವು." ಎಂದು ಹೇಳಿ ಅವನನ್ನು ತನ್ನ ಎರಡೂ ಕೈಗಳಿಂದ ಎತ್ತಿ ಹಿಡಿದು "ಆ ಬಾಲ್ಕನಿಯ ಅಂಚನ್ನು ಹಿಡಿದುಕೊಂಡು ಹತ್ತಿರವೇ ಇರುವ ಆ ಕಿಟಕಿಯನ್ನು ಸಮೀಪಿಸಿರಿ'' ಎಂದು ಸೂಚಿಸಿ ಅವನು ಆ ಅಂಚನ್ನು ಹಿಡಿದುಕೊಳ್ಳಲು, ಆಸರವಾಗಿದ್ದ ತನ್ನ ಕೈಗಳನ್ನು ಹಿಂತೆಗೆದುಕೊಂಡ. ಈ ಬಗೆಯ ಅನುಭವಕ್ಕೆ ಹೊಸಬನಾದ ರಾಜಕುಮಾರನು ಅದರ ಅಂಚನ್ನು ಹಿಡಿದುಕೊಂಡು ಜೋತುಬಿದ್ದು ಮುಂದೇನೆಂಬ ಮಾರ್ಗ ತೋರದೆ,ಕೊಂಚ ಸಮಯ ತೂಗಾಡಿ ಧೊಪ್ಪೆಂದು

ನೆಲದ ಮೇಲೆ ಬಿದ್ದು ಬಿಟ್ಟ. ಎಲ್ಲರೂ ಅವನ ಅವಸ್ಥೆಯನ್ನು ನೋಡಿ ನಕ್ಕು ಬಿಟ್ಟರು.

" ಮುಂದೇನು ? ಯಾರು ಪ್ರಯತ್ನಿಸುವಿರಿ ?" ಎಂದು ಸರ್ ವೀನ್ನೀಯು ಹಾಕಿದ ಪ್ರಶ್ನೆಗೆ ಯಾರೂ ಮುಂದೆ ಬರಲಿಲ್ಲವಾದುದರಿಂದ ಈ ಸಾಹಸದ ಕಾರ್ಯವು ತನ್ನಿಂದಲೇ ನೆರವೇರಬೇಕೆಂದು ನಿರ್ಧರಿಸಿ, ಸರ್ ವೀನ್ನೀಯು ಜೆಲ್‌ವೀನೀ ಮತ್ತು ಕೆವೇಲಿಯರ್ ಇವರುಗಳನ್ನು ಉಪ ಚಾರಕ್ಕೆಂದು ಕೇಳಿದ. ಆದರೆ ಆ ಕೆಲಸದಲ್ಲಿ ತೊಡಗಿ ಕೈಕಾಲು ಮುರಿದು ಕೊಳ್ಳುವುದು ಅವರಿಗೆ ಬೇಡಾಗಿತ್ತು. ತಾವು ಯಾರೂ ಪ್ರಯತ್ನಿಸುವುದಿಲ್ಲ ವೆಂದು ಅವರು ಹೇಳಿದರು.

" ಮತ್ತೇನು ಮಾಡುವುದು? ಓಬಾರ್ದಿಯವರ ದುಃಖವನ್ನು ನೋಡ ಲಾರೆ. ಆಯಿತು, ನಾನೇ ಪ್ರಯತ್ನಿಸುವೆನು" ಎಂದು ಹೇಳಿ ಪುನೆಯ ಪಕ್ಕದಲ್ಲಿದ್ದ ಒಂದು ಕಂಭವನ್ನು ಆಸರವಾಗಿ ಮಾಡಿಕೊಂಡು, ಸುರಿತ ಸರ್ಕಸ್ ಆಟಗಾರನಂತೆ,ಕಂಬಿಗಳ ನೆರವಿನಿಂದ ಗೋಡೆಯನ್ನು ಏರತೊಡ ಗಿದ. ಕಿಟಕಿಯನ್ನು ಸಮೀಪಿಸಿ ಒಳಗೆ ಹೋಗುವಾಗ ಕೆಳಗಿದ್ದವರೆಲ್ಲರೂ ಅವನ ಸಾಹಸಕ್ಕಾಗಿ ಕರತಾಡನ ಮಾಡುತ್ತಿರಲು ಸರ್ ವೀನ್ನೀಯು ಮತ್ತೆ ಕಾಣಿಸಿಕೊಂಡು ಕೊಂಚ ಗಾಬರಿಗೊಂಡ ಸ್ವರದಲ್ಲಿ, " ಬಾಗಿಲ ಹತ್ತಿರ ಬೇಗ ಬನ್ನಿ. ಇವೆತ್‌ಳು ಎಚ್ಚರತಪ್ಪಿ ಮಲಗಿರುವಳು'' ಎಂದು ಗಾಬರಿ ಯಿಂದ ಸೂಚಿಸಿದ.

ಗೊಂದಲವೇ ಗೊಂದಲ. ಎಲ್ಲರೂ ಓಬಾರ್ದಿಯನ್ನು ಮುಂದೆಮಾಡಿ ಕೊಂಡು ಮಾಳಿಗೆಯ ಮೆಟ್ಟಲುಗಳನ್ನು ಏರತೊಡಗಿದರು. ತೆರೆದಿದ್ದ ಬಾಗಿಲಿನಿಂದ ಎಲ್ಲರೂ ಕೋಣೆಯನ್ನು ಪ್ರವೇಶಿಸಿದರು. ಹಾಸಿಗೆಯ ಮೇಲೆ ಕಣ್ಮುಚ್ಚಿ ಶಾಂತ ಚಿತ್ತದಿಂದ ಬಿಳಿ ಉಡುಪುಗಳನ್ನು ಧರಿಸಿ ಅಪ್ಸರೆಯಂತೆ ಮಲಗಿದ್ದಳು, ಇವೆತ್. ಓಬಾರ್ದಿಯು ಓಡಿಬಂದು ಮಗಳಮೇಲೆಬಿದ್ದು "ಏನಾಗಿದೆ ನನ್ನ ಮಗುಗೆ? ನಿನಗೆ ಏನಾಗಿದೆ? ಹೇಳು ನನ್ನ ಮಗೂ'' ಎಂದು ಕೇಳತೊಡಗಿದಳು. ಅವಳ ಸ್ವರದಲ್ಲಿ ಆವೇಗದ ನಡುಕವಿತ್ತು. ದುಃಖದ ಅನುಕಂಪವಿತ್ತು.

ಟೇಬಲದ ಮೇಲೆ ಉರುಳಿ ಬಿದ್ದ ಕ್ಲೋರೊಫಾರಂ ಸೀಸೆಯನ್ನು

ತೆಗೆದು ಕೊಂಡು ಸರ್ವೀನ್ನೀಯು " ಈ ವಿಷದ ದ್ರಾವಕವು ಗಾಳಿಯಲ್ಲಿ ವ್ಯಾಪಿಸಿಕೊಂಡಿರುವುದರಿಂದ ಉಸಿರುಕಟ್ಟಿ ಎಚ್ಚರ ತಪ್ಪಿ ಮಲಗಿರಬಹುದು " ಎಂದು ಹೇಳಿ ಇವೆತ್‌ಳ ಎದೆಯ ಹತ್ತಿರ ತನ್ನ ಕಿವಿಯನ್ನಿಟ್ಟು ಎದೆಯ ಬಡಿತ ಚೆನ್ನಾಗಿರುವುದೆಂದು ತಿಳಿದು ತಲೆದೂಗುತ್ತ ಎದ್ದು ನಿಂತು " ಇವಳು ಬದುಕಿರುವಳು. ಗಾಬರಿಗೊಳ್ಳಬೇಕಾಗಿಲ್ಲ. ಇಲ್ಲಿ ಅಮೋನಿಯಾ ಇರುವುದೇ ?" ಎಂದು ಕೇಳಿದ.

ಕ್ಲೆಮೊನ್ಸಳೂ ಹೌಹಾರಿ ಹೋಗಿದ್ದಳು. ಅಮೋನಿಯಾ ಎಂಬ ಹೆಸರು ಸರಿಯಾಗಿ ಕೇಳಿಸದಿದ್ದುದರಿಂದ " ತಮಗೇನು ಬೇಕು? ಏನುಬೇಕು ?'' ಎಂದು ಆತುರದಿಂದ ಕೇಳಿದಳು.

''ಅಮೋನಿಯಾ!........ಅಮೋನಿಯಾ!!........ಇದೆ ಏನು ?" ಎಂದು ಗಟ್ಟಿಯಾಗಿ ಕೇಳಿದನು.

''ಈಗಲೇ ತರುವೆನು. '' ಎಂದು ಅದನ್ನುತರಲು ಅವಳು ಕೆಳಗೆ ಹೋಗಲು ಸರ್ವೀನ್ನೀಯು ಅಲ್ಲಿದ್ದವರನ್ನುದ್ದೇಶಿಸಿ "ಕೊಂಚ ದೂರ ಸರಿಯಿರಿ, ದಯವಿಟ್ಟು. ತುಂಬಾ ಗಾಳಿಬೇಕು. ನಿರ್ಮಲವಾದ ಹವೆ ಈಗ ಬೇಕೇ ಬೇಕು. " ಎಂದು ಕೇಳಿಕೊಂಡ.

ಓಬಾರ್ದಿಯು ಮುಖಮುಚ್ಚಿಕೊಂಡು ಅಳುತ್ತಾ ಅಲ್ಲಿಯೇ ಇವೆತ್‌ಳು ಮಲಗಿದ ಮಂಚದ ಮುಂದೆ ನೆಲದಮೇಲೆ ಕುಳಿತಿದ್ದಳು. ಬಿಕ್ಕಿ ಬಿಕ್ಕಿ ರೋದಿಸುತ್ತ " ಇವೆತ್ ! ಇವೆತ್ ! ನನ್ನ ಮುದ್ದುಗಿಳಿಯೆ, ನನ್ನ ಪ್ರೀತಿಯ ಅರಗಿಳಿಯೆ, ನನ್ನ ಮಗುವೆ, ಮಾತನಾಡು. ಇಲ್ಲಿ ನೋಡು, ಇವೆತ್ ! ಅಯ್ಯೋ, ಇವೆತ್ ! ಮಾತನಾಡುವದಿಲ್ಲವೆ ? ಅಯ್ಯೋ ಅಯ್ಯೋ ದೇವರೇ, ನೀನೆಲ್ಲಿರುವೆ ? ಈ ನನ್ನ ಮುದ್ದು ಮಗಳಿಗೆ ಈ ಕಷ್ಟವನ್ನೇಕೆ ತಂದೆ ? ಇವಳು ಜೀವಂತ ಉಳಿಯಲಾರಳೇ ?" ಎಂದು ಒಂದೇ ಬಗೆಯಾಗಿ ರೋದಿಸುತ್ತ ಪ್ರಲಾಪಿಸತೊಡಗಿದಳು.

ಮುಂದೇನೆಂಬುದನ್ನು ಅರಿಯದೆ ಗಾಬರಿಗೊಂಡು ಕೆಲವರು ಸುಮ್ಮನೆ ದೂರ ಸರಿದು ನೋಡುತ್ತ ನಿಂತಿದ್ದರು. ಕೆಲವರು ಇವೆತ್‌ಳ ಆರೈಕೆಗೆಂದು ಬೇಕು ಬೇಕಾದ ಸಾಮಾನುಗಳನ್ನು ತಂದು ಕೊಡುತ್ತಿದ್ದರು.

ಅಲ್ಲಿದ್ದವರಲ್ಲೊಬ್ಬರು '' ಮೇಲಿನ ಅರಿವೆಗಳನ್ನು ತೆಗೆದರೆ, ಅನು

ಕೂಲವಾಗ ಬಹುದಲ್ಲವೆ '' ಎಂದು ಸೂಚಿಸಿದರು.

ದುಃಖದ ಆವೇಶದಲ್ಲಿದ್ದ ಓಬಾರ್ಡಿಯು ಇವೆಟ್‌ಳು ಧರಿಸಿದ ಅರಿವೆಗಳನ್ನು ಬಿಚ್ಚತೊಡಗಿದಳು, ಆದರೆ ಅವಳಿಂದ ಆ ಕೆಲಸ ಸಾಧಿಸಲಿಲ್ಲ. ದುಃಖದ ನೋವು ಅವಳ ಶಕ್ತಿಯನ್ನು ಉಡುಗಿಸಿತ್ತು. ಅವಳ ಕೈಗಳು ಸುಮ್ಮನೇ ನಿಂತು ಬಿಟ್ಟವು. " ಈ ಕೆಲಸ ನನ್ನಿಂದ....ಆಗಲಾರದು....ನನಗೇನೂ ಸಾಧ್ಯವಾಗುವುದಿಲ್ಲ...''ಎಂದು ಹೇಳುವ ಹೊತ್ತಿಗೆ ಕ್ಲೆಮೆನ್ಸಳು ಔಷಧದ ಸೀಸೆಯೊಂದಿಗೆ ಬರಲು,ಸರ್‌ವೀನ್ನೀಯು ಅದರ ಮುಚ್ಚಳವನ್ನು ತೆಗೆದು, ಅದರೊಳಗಿನ ದ್ರಾವಕವನ್ನು ತನ್ನ ಕರವಸ್ತ್ರದ ಮೇಲೆ ಸುರುವಿಕೊಂಡು, ಆ ವಸ್ತ್ರವನ್ನು ಇವೆಟ್‌ಳ ಮೂಗಿನ ಹತ್ತಿರವೇ ಹಿಡಿದು, ಅದರ ವಾಸನೆ ಮೂಗಿನೊಳಗೆ ಹೋಗುವಂತೆ ಮಾಡಿದ. ಇವೆಟ್‌ಳು ಕೊಂಚ ಉಸಿರು ಬಿಗಿಹಿಡಿದು, ಮೂಗು ಮುರಿದಳು.

'' ಆ, ಈಗ ಕೊಂಚ ಧೈರ್ಯವಾಗುತ್ತಿದೆ; ಉಸಿರಾಟವಿದೆ. ಏನೂ ಭಯವಿಲ್ಲ. '' ಎಂದು ಸರ್‌ವಿನ್ನಿಯು ಹೇಳಿ, ಆ ದ್ರಾವಕದಿಂದ ಅವಳ ಮುಖದ ಎಲ್ಲ ಭಾಗವನ್ನು ಕುತ್ತಿಗೆಯನ್ನು, ಸವರಿ ಕ್ಲೆಮೆನ್ಸಳ ಸಹಾಯದಿಂದ, ಅವಳು ಧರಿಸಿದ್ದ ಮೇಲಿನ ಭಾರವಾದ ಅರಿವೆಗಳನ್ನು ತೆಗೆಯಿಸಿ, ಅವಳನ್ನು ಎರಡೂ ಕೈಗಳಲ್ಲಿ ಎತ್ತಿಕೊಂಡು ಅದೇ ಕೋಣೆಯಲ್ಲಿದ್ದ ಮತ್ತೊಂದು ದೊಡ್ಡ ಹಾಸಿಗೆಯ ಮೇಲೆ ಮಲಗಿಸಲು ಮುಂದೆಸಾಗಿದ. ಅರೆಬತ್ತಲೆಯಾಗಿದ್ದ ಇವೆಟ್‌ಳ ಚೆಲುವು ಬಹು ಮನಮೋಹಕವಾಗಿತ್ತು. ಹಾಗೆ ಎತ್ತಿಕೊಂಡ ಸಮಯದಲ್ಲಿ ಅನಿವಾರ್ಯವಾಗಿಯೇ ಅವಳ ಎದ್ದುನಿಂತ ಕುಚಗಳು ಅವನ ಎದೆಗೆ ತಾಕಲು ಅವನಲ್ಲಿ ವಿದ್ಯುತ್ ಚಲನವಾದಂತೆನಿಸಿತು. ಅವಳನ್ನು ಹಾಸಿಗೆಯಮೇಲೆ ಮಲಗಿಸಿ ಮೆಲ್ಲನೆ ಎದ್ದು ನಿಂತು, "ಇನ್ನೇನು ಗಾಬರಿಯಿಲ್ಲ. ಅವಳು ಸ್ವಲ್ಪಸಮಯದಲ್ಲಿ ಕಣ್ತೆರೆಯ ಬಹುದು. ನಾಡಿ ಮತ್ತು ಎದೆ ಹೊಡೆತಗಳು,ಕ್ರಮವಾಗಿಯೂ ಸರಿಯಾಗಿಯೂ ಇವೆ" ಎಂದು ಹೇಳಿದ ಧೈರ್ಯದ ಮಾತಿಗೆ ಎಲ್ಲರೂ ಸಂತೋಷ ಗೊಂಡರು.

ವಿಶಾಲವಾದ ಹಾಸಿಗೆಯ ಮೇಲೆ ಮಲಗಿದ ಆ ಚೆಲುವೆಯನ್ನೇ ಎಲ್ಲರೂ ನೋಡುತ್ತಿರುವದನ್ನು ಸರ್‌ವೀನ್ನೀಯು ಸೂಕ್ಷ್ಮವಾಗಿ ಗ್ರಹಿಸಿ, ಅವರನ್ನು ಹೊರಗೆ ಕಳಿಸುವುದೇ ಒಳಿತೆಂದು ನಿರ್ಧರಿಸಿ, ''ಮಿತ್ರರೆ

"ಇವೆತ್‌ಳು ಇನ್ನು ಕೊಂಚ ಸಮಯದಲ್ಲಿಯೇ ಎಚ್ಚರಗೊಳ್ಳುವಳು. ಕೋಣೆಯಲ್ಲಿ ನಾವಿಷ್ಟುಮಂದಿ ಒಂದೆಡೆ ಇರುವದು ಹಿತವಲ್ಲ. ಆದುದರಿಂದ ಸಾವಾಲ್ ಮತ್ತು ಓಬಾರ್ದಿಯವರಿಬ್ಬರೂ ನನ್ನೊಂದಿಗೆ ಇಲ್ಲಿರಲಿ ಮಿಕ್ಕವರೆಲ್ಲರೂ ಕೊಂಚ ಸಮಯ ಹೊರಗೆ ಹೋದರೆ ತುಂಬಾ ಅನುಕೂಲ" ಎಂದು ಅಧಿಕಾರವಾಣಿಯಲ್ಲಿಯೇ ಸೂಚಿಸಿದ. ಸಮಯದ ಅವಸರವನ್ನು ಅರಿತು ಆ ಜನರು ಮರು ಮಾತನಾಡದೇ ಹೊರಗೆ ಹೊರಟು ಹೋದರು.

ಎಲ್ಲರೂ ಹೋದ ನಂತರ ಓಬಾರ್ದಿಯು, ದುಃಖವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳುತ್ತ "ನನ್ನ ಮುದ್ದು ಮಗಳ ಗತಿ ಏನು? ಅಯ್ಯೋ ದೈವವೇ! ನೀವು ಯಾರೂ ಅವಳ ಜೀವವನ್ನು ಉಳಿಸಲಾರಿರಾ?" ಎಂದು ಪೇಚಾಡುತ್ತ ಸಾವಾಲ್‌ನ ತೆಕ್ಕೆಗೆ ಬಿದ್ದು ರೋದಿಸತೊಡಗಿದಳು. ಅವರಿಬ್ಬರೂ ಆ ಸ್ಥಿತಿಯಲ್ಲಿರಲು, ಸರ್‌ವೀನ್ನೀಯ ದೃಷ್ಟಿ ಟೇಬಲದ ಮೇಲಿದ್ದ ಒಂದು ಕಾಗದದ ಕಡೆ ಹೊರಳಿತು. ಅದು ಇವೆತ್‌ಳು ಓಬಾರ್ದಿಗೆ ಬರೆದ ಕೊನೆಯ ಸಂದೇಶ ಇವೆತ್‌ಳ ಅಕ್ಷರಗಳು! ಇದೇನೋ ವಿಚಿತ್ರವಿರಬೇಕೆಂದು ಭಾವಿಸಿ ಯಾರಿಗೂ ತಿಳಿಯದಂತೆ ಅದನ್ನೊಡೆದು, ಇವೆತ್‌ಳ ಸಾವಿನ ಸಂದೇಶವನ್ನು ಓದಿಕೊಂಡು "ಈ ಪತ್ರವು ಮಹತ್ವದ್ದು. ಇದು ನನಗೇ ಸಿಕ್ಕಿದುದು ಒಳಿತಾಯಿತು. ಇವೆತ್‌ಳ ಮಾನವೂ ಉಳಿಯಿತು.'' ಎಂದು ಮನದಲ್ಲಿಯೇ ಯೋಚಿಸಿ, ಆ ಪತ್ರವನ್ನು ತನ್ನ ಜೇಬಿನಲ್ಲಿಟ್ಟುಕೊಂಡು, ಇವೆತ್‌ಳ ಹಾಸಿಗೆಯನ್ನು ಸಮೀಪಿಸಿದ.

ಇವೆತ್‌ಳು ವಿರಾಮವಾಗಿ ಉಸಿರೆಳೆಯುತ್ತಿದ್ದಳು. ಪೂರ್ಣ ಎಚ್ಚರವಾಗಿದ್ದರೂ, ತನಗುಂಟಾದ ಪರಾಭವದ ಚಿಂತೆ ಅವಳ ಮುಖದಲ್ಲಿ ಮೂಡಿದ್ದುದನ್ನು ಮನಶ್ಶಾಸ್ತ್ರ ನಿಪುಣನಾದ ಸರ್‌ವೀನ್ನೀಯು ಗ್ರಹಿಸಿದ. ಪೂರ್ಣ ಎಚ್ಚರವಾಗಿದ್ದರೂ, ಬೇಕಾಗಿಯೇ ಅವಳು ಕಣ್ಣು ತೆರೆಯದೇ ಮಲಗಿರುವಳೆಂಬ ಯೋಚನೆಯಲ್ಲಿ ಅವನಿರಲು, ಓಬಾರ್ದಿಯು, ಇವೆತ್‌ಳ ಮಂಚದ ಮುಂದೆ ಕುಸಿದು ಬಿದ್ದು, "ಡಾಕ್ಟರನನ್ನಾದರೂ ಕರೆದು ವಿಚಾರ ಮಾಡಿದರೆ ಒಳಿತಲ್ಲವೇ?" ಎಂದು ಸರ್‌ವೀನ್ನೀಯನ್ನು ಕೇಳಿಕೊಂಡಳು.

ಸರ್‌ವೀನ್ನೀಯು ಉತ್ಸಾಹದ ಸ್ವರದಲ್ಲಿ "ಓಬಾರ್ದಿಯವರೇ, ಸುಮ್ಮನೇ ಕುದಿಯಬೇಡಿ ನಿಮ್ಮ ಮಗಳು ಇನ್ನು ಸ್ವಲ್ಪೇ ಸಮಯದಲ್ಲಿ

ಕುಳಿತು ಕೊಂಡು, ಅಕ್ಕರೆಯ ಮುದ್ದನ್ನು ಕೊಡುವಷ್ಟು ಶಕ್ತಿವಂತಳಾಗುವಳು. ತಾವು ಸ್ವಲ್ಪ ಸಮಯ ಹೊರಗೆ ಹೋಗುವ ಕೃಪೆ ಮಾಡುವುದಾದರೆ, ನಾನೇ ಎಲ್ಲವನ್ನೂ ಸರಿಪಡಿಸುವೆನು. ಯಾವ ಡಾಕ್ಟರನೂ ಬೇಡ.'' ಎಂದು ಧೈರ್ಯವಾಗಿ ನುಡಿದ.

ಬ್ಯಾರನ್ ಸಾವಾಲ್‌ನ ಹೆಗಲ ಮೇಲೆ ಬಾಗಿಕೊಂಡು ಹೆಜ್ಜೆ ಹಾಕುತ್ತ ಓಬಾರ್ದಿಯು ಹೊರಗೆ ಹೋದಳು. ಸರ್‌ವೀನ್ನಿಯು ಇವೆತ್‌ಳ ಮಗ್ಗುಲಲ್ಲಿ ಕುಳಿತು ಅವಳ ಮೃದು ಕೈಗಳನ್ನು ತೆಗೆದುಕೊಂಡು "ನನ್ನ ಮಾತು ಕೇಳಿಸುತ್ತಿದೆ ತಾನೆ?" ಎಂದು ಕೇಳಿದ.

ಅವಳು ಮರು ನುಡಿಯಲಿಲ್ಲ. ಅವಳು ಅವ್ಯಕ್ತ, ಸುಮಧುರ, ಸುಖದಾಯಕ ಆನಂದ ಸಾಮ್ರಾಜ್ಯದಲ್ಲಿದ್ದಳು. ಆ ಕನಸಿನ ರಾಜ್ಯದಿಂದ ಮತ್ತೆ ಈ ಲೋಕಕ್ಕೆ ಬರುವುದು ಇಷ್ಟವಿರಲಿಲ್ಲ. ಆದರೂ ಸರ್‌ವೀನ್ನಿಯು, ಕನಸಿನ ರಾಜ್ಯದಲ್ಲಿ ತನ್ನ ಕೈ ಹಿಡಿದ ತನ್ನ ಬಾಳ ಗೆಳೆಯನಾದ ಅದೇ ಪ್ರಿಯನು, ನಿಜವಾಗಿಯೂ ತನ್ನ ಕೈ ಹಿಡಿದುದರಿಂದ ಆಗುತ್ತಿರುವ ಪ್ರೇಮ ಪೂರಿತ ಸ್ಪರ್ಶಸುಖ ಅವಳನ್ನು ಆನಂದ ಸಾಗರದಲ್ಲಿ ಮುಳುಗಿಸಿತ್ತು. ಹಿಂದೆ ಎಂದೂ ಆಗದಂತಹ ಅತಿ ಮಧುರ ಅನುಭವ ಅವಳಿಗಾದಂತೆನಿಸಿತು. ತೆರೆದ ಕಿಟಕಿಯಿಂದ ಮೆಲ್ಲನೆ ಸುಳಿಯುವ ಗಾಳಿಯು ಸಹ ಒಂದು ಬಗೆಯ ಸುಖದ ತನುವನ್ನೇ ತರುತ್ತಿರುವಂತೆನಿಸಿತು. ಆ ಮಂದ ಮಾರುತ ಅವಳ ಕುರುಳನ್ನು ಮೆಲ್ಲನೆ ಕದಲಿಸುತ್ತಲಿದ್ದು, ಅವಳ ಬಳಲಿದ ಮುಖಕ್ಕೆ ನೂತನ ಶೋಭೆಯನ್ನು ತಂದೊಡ್ಡಿದ್ದಿತು. ಗಾಳಿಯು, ಅವಳ ಮೃದು ಪಲ್ಲವಗಳ ಮೇಲೆ ಹಾದು, ತುಟಿಗಳನ್ನು ತಾಕುವಾಗ, ಮೆಲ್ಲನೆ ಮುದ್ದಿಡುತ್ತಿರುವುದೇನೋ ಎಂಬಂತಿತ್ತು. ಈ ಸುಖದ ಅನುಭವದಿಂದ ಅದ ಆನಂದ ಹೊರಗೆ ನಿಸರ್ಗದಲ್ಲಿ ಎಲ್ಲೆಡೆಯಲ್ಲಿಯೂ ಅದೇ ಹೊಸತನ, ಚೈತನ್ಯಗಳು ವ್ಯಾಪಿಸಿಕೊಂಡಂತಿತ್ತು. ಸುತ್ತಲಿನ ಜಗತ್ತೆಲ್ಲವೂ ಆನಂದಮಯವೆಂದೆನಿಸಿತು ಗಿಡದ ಎಲೆಗಳಲ್ಲಿ, ಸಿಶಿಯ ನೆರಳಿನಲ್ಲಿ, ನದಿಯ ಮೇಲಿನ ಮಂಜಿನಲ್ಲಿ, ಹೂಬಳ್ಳಿಗಳ ಮೇಲೆ ಹಾರಿಬರುವ ಕೋಮಲ ಗಾಳಿಯಲ್ಲಿ, ನೆಲದ ಮೇಲೆ ಅರಳಿ ಬಿದ್ದ ರೋಜಾ ಪುಷ್ಪಗಳಲ್ಲಿ ಆನಂದಮಯ ವಾತಾವರಣ ನಿರ್ಮಿತವಾದ ತನ್ನನ್ನು ಹೊಸ ಜಗತ್ತಿನಲ್ಲಿ ತಂದಿರಿಸಿದಂತಹ ಅನುಭವ ಇವೆತ್‌ಳಿಗೆ ಆಯಿತು.

ಕಣ್ಣು ಮುಚ್ಚಿಕೊಂಡೇ ಈ ಆನಂದದಲ್ಲಿ ಇವೆತ್‌ಳು ಪರವಶಳಾಗಿದ್ದಳು. ಆ ವಿಷವಾಯುವಿನ ಪ್ರಭಾವ ಇನ್ನೂ ಪೂರ್ಣ ಮಾಯವಾಗಿರಲಿಲ್ಲ. ಆದರೆ ಈ ಜಗತ್ತಿನಿಂದ ದೂರ ಸರಿದು ಸಾಯಬೇಕೆಂಬ ಅವಳ ನಿರ್ಧಾರ ಸಡಿಲವಾಯಿತು. ಸಾವೆಂದರೆ ಅಂಜದಿದ್ದ ಅವಳ ಮನವು ಅದರ ಪ್ರಖರತೆಯನ್ನು ಅರಿತು, ನಡುಗತೊಡಗಿತು. ಈ ಮಾನವ ಜಗತ್ತಿನಿಂದ ದೂರಾಗುವುದರ ಬದಲು ಬದುಕಿ, ಪ್ರೀತಿಸಿ, ಪ್ರೇಮಿಸಲ್ಪಟ್ಟು—ಪ್ರೇಮ ಸಾಮ್ರಾಜ್ಯದಲ್ಲಿ–ಇದ್ದು ಜೈಸಬೇಕೆಂದು ಇವೆತ್‌ಳ ಮನಸ್ಸು ಹೇಳತೊಡಗಿತು.

"ಇವೆತ್, ನನ್ನ ಮಾತು ಕೇಳಿಸುತ್ತಿದೆಯೆ?" ಎಂದು ಸರ್‌ವೀನ್ನೀಯು ಮತ್ತೆ ಕೇಳಿದ. ಅವಳಿಗೆ ಆ ಮಾತುಗಳು ಅತ್ಯಂತ ನೂತನ ಹರುಷವನ್ನುಂಟು ಮಾಡಿದವು.

ಇವೆತ್‌ಳು ಮುಚ್ಚಿದ ಕಣ್ಣುಗಳನ್ನು ಮೆಲ್ಲನೆ ತೆರೆಯಬೇಕೆಂದು ನಿಶ್ಚಯಿಸಿದಳು. ಮೆಲ್ಲನೆ ಅವಳ ಕಣ್ಣುಗಳು ಅರಳುವುದನ್ನು ಕಂಡು ಸರ್‌ವೀನ್ನೀಯು "ಇವೆತ್, ಇದೇನು ಮೌನ ನಿನ್ನದು? ಮಾತನಾಡಬಾರದೆ?" ಎಂದು ಕೇಳಿದ.

ಮೆಲು ಧನಿಯಲ್ಲಿಯೇ "ನನಗೆ ಈ ಜಗತ್ತು ಬಲು ಬೇಸರವೆನಿಸಿದೆ. ಈ ಜಗತ್ತಿನಲ್ಲಿ ನನಗೆ ಸುಖವೇ ಇಲ್ಲವೆಂದು ನನ್ನ ಎಣಿಕೆ" ಎಂದು ಹೇಳಿದಳು, ಇವೆತ್.

ಬೆಚ್ಚನೆ ಅವಳೆರಡೂ ಕೈಗಳನ್ನು ಸರ್‌ವೀನ್ನೀಯು ಅದಿಮುತ್ತ ಇಂತಹ ವಿಪತ್ತನ್ನು ನೀನು ಎದುರಿಸುವ ಸಾಹಸ ಮಾಡಿದೆ, ಇವೆತ್? ಇದರಿಂದ ನೀನು ಏನನ್ನು ಸಾಧಿಸಬೇಕೆಂದು ಬಯಸಿದೆ? ಇಂತಹ ಗಾಬರಿಯೇ? ಮತ್ತೊಮ್ಮೆ ಹೀಗೆ ನಿನ್ನ ಪ್ರಾಣಕ್ಕೆ ಅಪಾಯ ತಂದುಕೊಳ್ಳುವದಿಲ್ಲತಾನೆ?" ಎಂದು ಕೇಳಿದನು.

ಅವಳು ಮೌನದಿಂದ ಇಲ್ಲವೆಂದು ತಲೆಯನ್ನು ಮೆಲ್ಲನೆ ಅಡಿಸಿದಳು. ಅದರೊಂದಿಗೆ ಅವಳ ಬಾಯ ಬಾಗಿಲಲ್ಲಿ ಮೆಲುನಗೆಯ ಸುಳಿವು ಸೂಸುತ್ತಿದ್ದುದು ಅವನಿಗೆ ಕಂಡು ಬಂತು. ಮೆಲ್ಲನೆ ತನ್ನ ಜೇಬಿನಲ್ಲಿರಿಸಿದ ಕಾಗದವನ್ನು ಹೊರತೆಗೆದು ಈ "ಪತ್ರವನ್ನು ನಿನ್ನ ತಾಯಿಗೆ ಕೊಡಲೆ?'' ಎಂದು ಕೇಳಿದಾಗ ಇವೆತ್‌ಳು ಸ್ವಲ್ಪ ಹುಬ್ಬು ಗಂಟಿಕ್ಕಿಕೊಂಡು ಮತ್ತೆ ಬಲುದೈನ್ಯದ

ನೋಟದಿಂದ ಬೇಡವೆಂದು ಸನ್ನೆ ಮಾಡಿದಳು.

ಮುಂದೇನು ಮಾಡಬೇಕೆಂಬುದು ಸರ್ವೀನ್ನಿಗೆ ತೋಚದಂತಾಯಿತು. “ಹುಚ್ಚು ಹೆಣ್ಣೇ; ನನ್ನ ಅರಗಿಳಿಯೇ ನೀನು ಸಾವಿನೊಂದಿಗೆ ಈ ಬಗೆಯಾಗಿ ಸರಸವಾಡುವುದು ವಿಹಿತವೆ? ದೇವರು ನಮಗಿತ್ತ ಈ ಅಲ್ಪ ಜೀವನದಲ್ಲಿಯೇ ಸುಖವನ್ನು ಹುಡುಕಿಕೊಂಡು ಅದು ದೊರೆಯದೆ ಇದ್ದಲ್ಲಿ, ಅದನ್ನು ಪಡೆಯಲು ಸಾಧಕನಂತೆ ಪ್ರಯತ್ನಿಸಬೇಕೇ ಹೊರತು, ಸೋತು ಹೋಗಿ ಸುಮ್ಮನೆ ಅಚಾತುರ್ಯದ, ಹೇಡಿತನದ ಮಾರ್ಗವನ್ನನುಸರಿಸುವುದು ಒಳಿತಲ್ಲ. ನಿನ್ನ ದುಃಖವನ್ನು ಅರಿಯದೇ ಸುಮ್ಮನೇ ನಾನು ನಿನ್ನನ್ನು ಕಾಡಿದೆನೆಂದು ಭಾವಿಸಬೇಡ. ನಾನು ನಿನ್ನನ್ನು ಮದುವೆಯಾಗುವೆನೆಂದು ಖಂಡಿತವಾಗಿಯೂ ಈಗ ಇಲ್ಲಿ ಮಾತುಕೊಡುವೆನು. ಮತ್ತೇನು ಬೇಕು?” ಎಂದು ವಚನವಿತ್ತ ಸರ್ವೀನ್ನಿಯ ಮಾತಿಗೆ ಅವಳ ಮುಖವು ಅರಳಿತು. ಕಣ್ಣರಳಿಸಿ ಪ್ರಿಯನನ್ನು ತುಂಬಿದ ಹರುಷದಿಂದ ನೋಡಿದಳು. ಅವಳ ಹೃದಯದಲ್ಲಿ ಇಲ್ಲಿಯುವರೆಗೂ ಅಡಗಿದ್ದ ಒಂದೇ ಒಂದು ನಿಟ್ಟುಸಿರು ಹೊರಬಂತು. ಮರುಕ್ಷಣದಲ್ಲಿಯೇ ತನ್ನ ಪ್ರಿಯನ ಅಭಿವಚನದಿಂದ ಕಣ್ಣರಳಿಸಿ, ಮುಖ ಅಲುಗಿಸಿ ಮವಸಾರ ಮಲಗಿದಲ್ಲಿಯೇ ನಕ್ಕು ನಲಿದಳು. ‘ನಿಮ್ಮ ಈ ಕರುಣಾಮಯ..’’ ಎಂದು ಏನನ್ನೋ ಹೇಳ ಹೋಗಿ ಆನಂದದ ಭರದಲ್ಲಿ ಮಾತನಾಡಲಾರದೆ ಮುಸಿ ಮುಸಿ ನಗುವಿನೊಂದಿಗೆ ಅವನನ್ನೇ ನೋಡಿದಳು. ಆ ನೋಟದಲ್ಲಿ ಅವಳ ಆಶೆಯ ಕುರುಹು ಕಾಣುತ್ತಿತ್ತು.

ಅವಳ ಕಣ್ಣ ದೃಷ್ಟಿ ಅವನಲ್ಲಿ; ಅವನ ನಗುವಿನ ನೋಟ ಅವಳಲ್ಲಿ: ಇಬ್ಬರ ಹಿಗ್ಗಿನ ನೋಟಗಳು ಕೂಡಿ ಒಂದಾದವು. ಅವಳ ಆ ನೊಟದಲ್ಲಿ ನೀರವತೆಯ, ವಿಶ್ವಾಸದ, ನಚ್ಚಿನ ಕರೆಯಿತ್ತು. ಅನಿರೀಕ್ಷಿತವಾಗಿಯೇ ಎಲ್ಲಿಯೂ ಇಲ್ಲದ ಚೇತನ ಅವಳಲ್ಲಿ ಉಂಟಾಗಿ ತೋಳುಗಳನ್ನೆತ್ತಿದಳು. ಆಗಲವಾದ ಅವಳ ಪ್ರೇಮಮಯ ಬಾಹು ಬಂಧನದಲ್ಲಿ ಅವನು ಸಿಕ್ಕುಬಿದ್ದ. ಆ ಪ್ರೇಮಿಗಳ ತುಟಿಗಳು ಅಂತೂ ಒಮ್ಮೆ ಪರಸ್ಪರ ಸಮ್ಮತಿಯಿಂದ ಕೂಡಿಕೊಂಡವು!

ಅವರಿಬ್ಬರೂ ಮೈಮರೆತು ಎಷ್ಟು ಹೊತ್ತು ಆಲಿಂಗನ ಸುಖದಲ್ಲಿ

ದ್ದರೋ ಹೇಳಲಾಗದು. ಅವರಿಬ್ಬರ ಗಾಢಾಲಿಂಗನದಿಂದ ಜೋಲಿ ತಪ್ಪು ವಂತಾದಾಗ, ಅವನು ಎಚ್ಚೆದ್ದು ಕುಳಿತುಕೊಂಡ. ಇವೆತ್‌ಳ ಮುಖ ದಲ್ಲಿ ನೂತನ ಕಳೆ ತ್ರಲೆದೋರಿತ್ತು. ತಾನು ಗೆದ್ದೆನಲ್ಲವೆಂಬ ಹೆಮ್ಮೆ ಗೆಲುವಿನ ಸೊಗಸು ಆವಳ ಮುಖದ ಮೇಲೆ ಒಡೆದೆದ್ದು ಕಾಣು ತ್ತಿತ್ತು. ಆಲಿಂಗನವನ್ನು ಸಡಲಿಸಬೇಕೆಂದು ಅವನು ತಡವರಿಸಲು “ಕೊಂಚ ನಿಲ್ಲಿ, ಆವಸರವಿಲ್ಲ. ನನಗೆ ಆಗುತ್ತಿರುವ ಆನಂದವನ್ನು ತಡೆಯ ಬೇಡಿ'' ಎಂದು ಮತ್ತೊಮ್ಮೆ ಅವನನ್ನು ಬಿಗಿಯಾಗಿ ಅಪ್ಪಿ ಕಣ್ಮುಚ್ಚಿ ಸುಮ್ಮನಿದ್ದು, ಮತ್ತೊಮ್ಮೆ ಕಣ್ತೆರೆದು, “ಪ್ರಿಯರೆ, ನನ್ನನ್ನು ನೀವು ಮನ ಸಾರೆ ಪ್ರೀತಿಸುವಿರಲ್ಲವೆ? ನನ್ನನ್ನು ಮದುವೆಯಾಗಿ ಮಾನವಂತಳಂತೆ ನಾನು ಬಾಳು ಸಾಗಿಸಲು ನೆರವಾಗುವಿರಲ್ಲವೆ? ನನ್ನನ್ನು ಈ ಪಾಪಕೂಪ ದಿಂದ ಈ ವಿಷದ ವಾತಾವರಣದಿಂದ........?” ಎಂದು ಮುಂದೇನೋ ಹೇಳುವುದರಲ್ಲಿದ್ದಳು, ಇವೆತ್.

ಆದರೆ ಒಂದು ಕೈಯಿಂದ ಅವಳ ಮುದ್ದು ಬಾಯಿಯನ್ನು ಮುಚ್ಚಿ, ಇನ್ನೊಂದು ಕೈಯಿಂದ ಅವಳ ಮೃದು ಹಸ್ತವನ್ನೆತ್ತಿ ಹಿಡಿದು “ನೀನು ನನ್ನವಳು. ನನ್ನವಳಾಗಿಯೇ ಉಳಿಯುವೆ.” ಎಂದು ಹೇಳಿಮುದ್ದಿಸಿದ.

ಹೊರಗೆ ಯಾರೋ ಬರುವ ಸಪ್ಪಳವಾಯಿತು. ಆವನು ಚೇತರಿಸಿ ಕೊಂಡೆದ್ದು ನಿಂತು “ಓಬಾರ್ದಿಯವರೇ, ತಾವಿನ್ನು ಬರಬಹುದು. ಎಲ್ಲವೂ ಮುಗಿದಿದೆ. ನಿಮ್ಮ ಮಗಳು ಈಗ ಪೂರ್ಣ ಎಚ್ಚರಗೊಂಡಿರುವಳು.” ಎಂದು ಹೇಳುತ್ತಿರುವಾಗ ಓಬಾರ್ದಿಯು ಓಡಿ ಬಂದು ಎರಡೂ ಕೈಗಳನ್ನು ಹರವಿ ಮಗಳನ್ನು ತಬ್ಬಿಕೊಂಡು, ಅವಳ ಮುಖವನ್ನು ಅನೇಕ ಸಲ ಮುದ್ದಿಸಿದಳು.

ಸರ್‌ವಿನ್ನೀಯು ಹೆಚ್ಚಿನ ಆನಂದದಿಂದ ಬಾಲ್ಕನಿಯನ್ನು ಪ್ರವೇಶಿಸಿ, ತಣ್ಣನ ಬಯಲಲ್ಲಿ ನಿಂತು ಒಂದು ಸುಂದರವಾದ ಪ್ರೇಮಗೀತೆಯ ಸಾಲು ಗಳನ್ನು ನೆನೆಯುತ್ತ ಮನದಲ್ಲಿಯೇ ಹಿಗ್ಗಿದ.

—: ಸಮಾಪ್ತಿ :—

## ಸಂಚಾಲಕರ ಅರಿಕೆ

**ಕಾಗದದ ಬಿಕ್ಕಟ್ಟು ನಮ್ಮನ್ನು ಪೀಡಿಸಿತು. ಆದರೂ ಸಾಹಸದಿಂದ, " ಇವಳ್ " ಕಾದಂಬರಿಯನ್ನು ತಮ್ಮ ಮುಂದಿರಿಸಿದ್ದೇವೆ. ಮುಂದೆ ತಮಗೆ ಸಲ್ಲಿಸಬೇಕಾದ ಇನ್ನೆರಡು ಪುಸ್ತಕಗಳನ್ನು ಸಕಾಲದಲ್ಲಿ ಖಂಡಿತವಾಗಿಯೂ ಒದಗಿಸುವೆವೆಂದು ಭರವಸೆಯನ್ನೀಯುತ್ತೇವೆ.**

ಮಾಲೆಯು ಮುಗ್ಗರಿಸಿ ನಿಲ್ಲದೆ, ಮುಂಬರಿಯಲು ಅನೇಕ ರೀತಿಯಲ್ಲಿ ನೆರವಾದ ಚಂದಾದಾರರಿಗೆ, ಮಿತ್ರರಿಗೆ ಮತ್ತು ಸಲಹೆಗಾರರಿಗೆ ನಮ್ಮ ಅನಂತ ವಂದನೆಗಳು. ಇನ್ನು ಮುಂದೆಯೂ ಹೆಚ್ಚಿನ ರೀತಿಯಲ್ಲಿ ನಮಗೆ ಎಲ್ಲ ಜನರೂ ನೆರವಾಗುವರೆಂದು ಆಶಿಸಲಾಗಿದೆ.

**ಹುಬ್ಬಳ್ಳಿ**
೨೦–೭–೫೧

ಸಂಚಾಲಕರು,
**ಆನಂದ ಗ್ರಂಥ ಮಾಲಾ.**

—೦—